# ಚಂದಮಾಮ

ಸೆಪ್ಟೆಂಬರ್ '೭೮



## ಈ ಸಂಚಿಕೆಯಲ್ಲಿ






ಬಿಡಿ ಪ್ರತಿ ರೂ. ೧-೨೫ ವಾರ್ಷಿಕ ಚಂದಾ ರೂ. ೧೫.೦೦

# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'
ಸಂಚಾಲಕರು : ನಾಗಿರೆಡ್ಡಿ

---

ಪರಸ್ಪರ ಆದರ ಸಹಾಯ ಸೌಹಾರ್ದ್ರತೆಗಳ ಭಾವನೆಗೆ ಅನುಕೂಲವಾಗಿ ಗ್ರಾಮಗಳಲ್ಲಿ ಇರುವಂತಹ ವಾತಾವರಣವು ಪಟ್ಟಣಗಳಲ್ಲಿರುವುದಿಲ್ಲ. ಗ್ರಾಮಗಳಲ್ಲಿದ್ದವರು ಹೆಚ್ಚಾಗಿ ಕಷ್ಟಪಟ್ಟು ಶ್ರಮಿಸಿ ಸುಖತೋಡಿಕೊಳ್ಳುವವರಾದುದರಿಂದ ಇನ್ನೊಬ್ಬರ ಕಷ್ಟ ಸುಖಗಳನ್ನು ಅರಿಯ ಬಲ್ಲವರಾಗಿರುತ್ತಾರೆ. ಪಟ್ಟಣಗಳೆಂದರೆ ವ್ಯಾಪಾರ ವ್ಯವಹಾರಗಳಿಂದಲೇ ಮೆರೆದು ಬಾಳುವಂತಹುದು. ಅಲ್ಲಿಯದೆಲ್ಲವೂ ಹಣದ ಲೆಕ್ಕಾಚಾರಗಳೇ. ಅದರಲ್ಲಿ ತನ್ನವರು ಪರರು ಎಂಬ ಭೇದವಿಲ್ಲ. ಇದನ್ನು ಈ ಸಂಚಿಕೆಯ "ಪಟ್ಟಣ ಗಾಳಿ" ಎಂಬ ಕಥೆಯಲ್ಲಿ ನೋಡಬಹುದು.

ಮುಂದಿನ ಸಂಚಿಕೆಯಿಂದ ಓದುಗರ ಪ್ರಶ್ನೆಗಳಿಗೆ ಉತ್ತರ ಕೊಡಬೇಕೆಂದು ನಿಶ್ಚಯಿಸಿದ್ದೇವೆ. ಆದುದರಿಂದ ಎಲ್ಲರಿಗೂ ಉಪಕರಿಸುವಂತಹ ಪಶ್ನೆಗಳನ್ನು ಒಬ್ಬೊಬ್ಬರು ಎರಡರಂತೆ ಕಳುಹಿಸಬಹುದು.

---

ಸಂಪುಟ : ೨೧　　ಸೆಪ್ಟೆಂಬರ್ '೬೯　　ಸಂಚಿಕೆ : ೩

ಬಿಡಿ ಪ್ರತಿ ರೂ. ೧-೨೫ :: ವಾರ್ಷಿಕ ಚಂದಾ ರೂ. ೧೫-೦೦









ಅಸತ್ಯ ಸರ್ವ ಲೋಕೇಸ್ಮಿನ್
ಸತತಂ ಸತ್ಕೃತಾಃ ಪ್ರಿಯೈಃ
ಭರ್ತಾರಂ ನಾನು ಮನ್ಯಂತೇ
ವಿನಿಪಾತಗತಂ ಸ್ತ್ರಿಯಃ ೧.

ಲೋಕದಲ್ಲಿ ದುಷ್ಟ ಸ್ತ್ರೀಯರು, ಗಂಡನು ಎಷ್ಟೋ ತಮ್ಮ ಇಚ್ಛೆಯನ್ನು ನೆರವೇರಿಸಿದರೂ ಸಂತೋಷ ಪಡಿಸಿದರೂ ಅವನಿಗೆ ದುರ್ದಶೆ ಪ್ರಾಪ್ತವಾದಾಗ ಲಕ್ಷ್ಯಮಾಡುವುದಿಲ್ಲ.

ಏಷ ಸ್ವಭಾವೋ ನಾರೀಣಾಂ
ಅನುಭೂಯ ಪುರಾಸುಖಂ
ಅಲ್ಪಾ ಮಪ್ಯಾಪದಂ ಪ್ರಾಪ್ಯ
ದುಷ್ಯಂತಿ ಪ್ರಜಹತ್ಯಪಿ ೨.

ಅಂತಹ ಸ್ತ್ರೀಯರ ಸ್ವಭಾವ, ಮೊದಲು ಬಹಳ ಸುಖ ಅನುಭವಿಸಿ ಕೂಡಾ ಗಂಡನಿಗೆ ಕಷ್ಟಗಳು ಬಂದರೆ ದೂಷಿಸಿ ಬಿಟ್ಟು ಹೋಗಲೂ ನೋಡುವಂತಹುದು.

ಅಸತ್ಯಶೀಲಾ ವಿಕೃತಾ
ದುರ್ಗ್ರಾಹ್ಯ ಹೃದಯಾಸ್ಸದಾ
ಯುವತ್ಯಃ ಪಾಪ ಸಂಕಲ್ಪಾಃ
ಕ್ಷಣ ಮಾತ್ರಾ ದ್ವಿರಾಗಿಣಃ ೩.

ಸುಳ್ಳು ಹೇಳುತ್ತ, ವಿಕಾರ ಗುಣದವರಾಗಿ, ತಿಳಿಯಲಾಗದ ಮನಸ್ಸಿನಿಂದ, ಪಾಪಬುದ್ಧಿಯಲ್ಲಿ ಕ್ಷಣ ದೊಳಗೆ ಒಡೆಯುವ ಹೃದಯದವರಾಗಿರುವರು.

ದುಷ್ಟ ಸ್ತ್ರೀಯರು




## ೬೨

ಮೊಸಳೆ ಚಿಂತೆಯಿಂದ ಸಣ್ಣ ಮೋರೆ ಮಾಡಿ ಕೊಂಡು ಕೋತಿಯ ಹತ್ತಿರ ಬಂದಿತು. ಅದು ಎಂದಿನಂತಿಲ್ಲದೆ ಚಿಂತೆಯ ಮುಖಹೊತ್ತು, ಸಾವಕಾಶವಾಗಿ ಬಂದುದನ್ನು ನೋಡಿ ಕೋತಿ, "ಮಿತ್ರಾ, ನೀನು ಎಂದಿನಂತೆ ಉತ್ಸಾಹದಲ್ಲಿಲ್ಲವಲ್ಲಾ ? ಏನೋ ಬಹಳ ದುಃಖದಲ್ಲಿರುವ ಹಾಗೆ ಕಾಣುತ್ತದೆ, ಏಕೆ? ಏನಾಯಿತು ?" ಎಂದು ಕೇಳಿತು.

ಅದಕ್ಕೆ ಮೊಸಳೆ ಹೇಳಿತು: "ಮಿತ್ರನೇ, ನನ್ನ ಹೆಂಡತಿ ನನ್ನ ಮೇಲೆ ಬಹಳ ಕೋಪ ಮಾಡಿಕೊಂಡಳು. ನನ್ನನ್ನು ಕೃತಘ್ನ ಎಂದಳು, ನನಗೆ ಮುಖ ತೋರಿಸಲು ನಾಚಿಕೆ ಯಾಗುವುದಿಲ್ಲವೇ ಎಂದು ಕೇಳಿದಳು. ದಿನಾ ಅಮೃತದಂತಹ ಹಣ್ಣು ಕೊಡುವ ಆ ಕೋತಿಗೆ ನೀನು ಪ್ರತ್ಯುಪಕಾರ ಏನು ಮಾಡಿದಿ? ಒಂದುಸಾರಿಯಾದರೂ ಅದನ್ನು ನಮ್ಮ ಮನೆಗೆ ಕರೆದು ಉಪಚರಿಸಿದೆಯಾ ? ಈ ನಿನ್ನ ಕೃತಘ್ನತೆಗೆ ಪರಿಹಾರವೇ ಇಲ್ಲ. ಇವತ್ತು ನನ್ನ ಬಾವ ಮೈದುನ ಕೋತಿಯನ್ನು ಕರಕೊಂಡುಬಂದರೆ ಸರಿ, ನಮ್ಮಿಂದಾಗುವ ಉಪಚಾರ ಮಾಡೋಣ. ಇಲ್ಲದಿದ್ದರೆ ನಾನು ಆತ್ಮಹತ್ಯ ಮಾಡಿಕೊಳ್ಳುತ್ತೇನೆ. ನಾವು ಪುನಃ ಕೂಡುವುದು ಆ ಲೋಕದಲ್ಲಿಯೇ. ಹೀಗೆಲ್ಲಾ ನನ್ನ ಹೆಂಡತಿ ಹೇಳಿದಳಯ್ಯ. ಆ ನಿನ್ನ ಅತ್ತಿಗೆಯೊಂದಿಗೆ ವಾಗ್ವಾದ ಮಾಡುತ್ತಾ ಇಷ್ಟು ಹೊತ್ತಾಯಿತು. ನಿನ್ನನ್ನು ಕರಕೊಂಡು ಬರುವೆನೆಂದು ಮಾತು ಬೇರೆ ಕೊಟ್ಟಿದ್ದೇನೆ. ಆದ್ದರಿಂದ ನೀನು ನನ್ನೊಂದಿಗೆ ಬಂದುಬಿಡು. ನಿನ್ನ ಅತ್ತಿಗೆ ನಿನ್ನನ್ನು ಇದಿರುಗೊಳ್ಳಲು ಕಾದಿದ್ದಾಳೆ. ಮನೆ ತೊಳೆದು ರಂಗೋಲೆಯ ಅಲಂಕಾರ ಮಾಡಿದ್ದಾಳೆ. ನಿನ್ನನ್ನು ಇದಿರು ನೋಡುತ್ತಾ ಬಾಗಿಲಲ್ಲೇ ನಿಂತಿದ್ದಾಳೆ."

ಆ ಮಾತಿಗೆ ಕೋತಿ, "ಹೌದು. ಅತ್ತಿಗೆ ಹೇಳುವುದೇನೋ ನಿಜವೇ. ಮಿತ್ರರು ಯಾವಾಗಲೂ ದೂರ ದೂರ ಇರುವುದು ಸರಿಯಲ್ಲ. ಕೊಡುವುದು ತೆಗೆದು ಕೊಳ್ಳುವುದು, ಗುಟ್ಟುಗಳನ್ನು ಹೇಳುವುದು, ಕೇಳುವುದು, ತಿನ್ನುವುದೂ ತಿನಿಸುವುದೂ ಇವೆಲ್ಲಾ ಆಪ್ಯಾಯತೆಯನ್ನು ತೋರಿಸುವ ದಾರಿಗಳಾಗಿವೆ. ಆದರೆ ನನ್ನದೂ ನಿನ್ನದೂ ಮನಸ್ಸು ಕೂಡಿದ್ದರೂ ವಾಸಸ್ಥಳವು ಕೂಡುವುದಿಲ್ಲವಲ್ಲಾ ? ನಾನೇನೋ



ಮರದ ಮೇಲಿನವನು. ನೀನೋ ನೀರಲ್ಲಿರುವವನು. ನಾನು ನಿನ್ನ ಮನೆಯನ್ನು ಹೇಗೆ ಪ್ರವೇಶಿಸಲು ಸಾಧ್ಯ ? ಆದುದರಿಂದ ನೀನು ಅತ್ತಿಗೆಯನ್ನೇ ಇಲ್ಲಿಗೆ ಕರೆದುಕೊಂಡು ಬರುವುದು ಒಳ್ಳೆಯದು. ನಾನು ಆಕೆಗೆ ಪಾದಾಭಿವಂದನೆ ಮಾಡಿ ಆಶೀರ್ವಾದ ಪಡೆಯುತ್ತೇನೆ " ಎಂದು ಹೇಳಿತು.

" ಮಿತ್ರನೇ, ಅದೇನೂ ಕಷ್ಟವಿಲ್ಲ. ನೀರಿನ ಅಡಿಯಲ್ಲಿ ಚೆಂದಾಗಿರುವ ಮರಳಿನ ದಿಬ್ಬದ ಪಕ್ಕದಲ್ಲೇ ನಮ್ಮ ಮನೆ. ಆದುದರಿಂದ ನೀನು ನನ್ನ ಬೆನ್ನ ಮೇಲೆ ಏರಿ ನಿರ್ಭಯವಾಗಿ ಬರಬಹುದು ಹಾಗೆಲ್ಲಾ ಇದ್ದರೆ ನಾನು ನಿನ್ನನ್ನು ಕರೆಯುವೆನೇ ? ನಿನಗೆ ಯಾವ ಕಷ್ಟವೂ ಇಲ್ಲ " ಎಂದಿತು ಮೊಸಳೆ.

ಹೊಸ ಅನುಭವವನ್ನು ನೋಡಲು ಆಸೆ ಪಡುತ್ತಿದ್ದ ಕೋತಿ, " ಹಾಗಾದರೆ ಸರಿಯಪ್ಪ. ತಡ ಮಾಡುವುದೇಕೇ ? ಈಗಲೇ ಹೊರಟೆ, ಇದೋ ನಿನ್ನ ಬೆನ್ನ ಮೇಲೆ ಏರುತ್ತೇನೆ " ಎಂದು ಹೇಳಿ ಕೋತಿ ಬೇಗಬೇಗನೆ ಮೊಸಳೆಯ ಬೆನ್ನಿನ ಮೇಲೆ ಎಗರಿ ಬಂದು ಕುಳಿತುಕೊಂಡಿತು.

ಮೊಸಳೆ ನೀರ ಬದಿಯಿಂದ ಹೊರಟಿತು. ಅದು ಆಳದ ಕಡೆಗೆ ಹೋಗುವುದನ್ನು ನೋಡಿ ಕೋತಿ ಹೆದರಿ, " ಮಿತ್ರಾ, ಮೆಲ್ಲ ಮೆಲ್ಲ ಹೋಗು. ಇಷ್ಟೊಂದು ವೇಗವಾಗಿ ಹೋಗಬೇಡ. ತೆರೆಗಳೆದ್ದು ನನ್ನ ದೇಹವೆಲ್ಲಾ ನೆನೆಯುತ್ತಿದೆ. ರಭಸ ತಗ್ಗಿಸಯ್ಯಾ" ಎಂದಿತು.

ಆಗ ಮೊಸಳೆ ಮನಸ್ಸಿನಲ್ಲಿ " ಇಲ್ಲಿ ನೀರು ಬಹಳ ಆಳವಾಗಿದೆ. ಕೋತಿ ತಪ್ಪಿಸಿಕೊಳ್ಳಲು ಸಾಧ್ಯವೇ ಇಲ್ಲ. ಅದೀಗ ಪೂರ್ತಿ ನನ್ನ ಅಧೀನದಲ್ಲಿದೆ. ಆದುದರಿಂದ ಇದನ್ನು ನನ್ನ ಮನೆಗೆ ಏತಕ್ಕೆ ಒಯ್ಯುವೆನೆಂಬುದನ್ನು ಹೇಳಿ ಬಿಡಬಹುದು. ಆಗ ಮೋಸದ ಪಾಪ ಹತ್ತುವುದಿಲ್ಲ" ಎಂದುಕೊಂಡು, " ಮಿತ್ರ ಕೋತಿಯೇ ! ನನ್ನ ಹೆಂಡತಿಯ ಕೋರಿಕೆಯಂತೆ ನಿನ್ನನ್ನು ಕೊಂದು ಅವಳಿಗೆ ತಿನಿಸಲಿಕ್ಕೆ ಕೊಂಡೊಯ್ಯುತ್ತಿದ್ದೇನೆ. ಒಳ್ಳೆಯ ಮಾತಿನಿಂದ ಮೋಸ ಪಡಿಸಿ ನಿನ್ನ ಹಿಡಿದುಕೊಂಡೆ. ನಿನ್ನ ಸಾವು ಸಮೀಪಿಸಿಬಿಟ್ಟಿತು. ಇಷ್ಟ ದೈವವನ್ನು ಪ್ರಾರ್ಥಿಸುತ್ತ ತೆಪ್ಪಗಿರು. ನೀನೇನು ಮಾಡಿದರೂ ಇನ್ನು ನನ್ನಿಂದ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ" ಎಂದು ಹೇಳಿತು.

ಗಾಬರಿ ಬಿದ್ದ ಕೋತಿ ಕೇಳಿತು : " ಮಿತ್ರನೇ, ನಾನು ನಿನಗಾಗಲೀ, ನಿನ್ನ ಹೆಂಡತಿಗಾಗಲೀ ಏನು ದ್ರೋಹ ಮಾಡಿದೆನೆಂದು ನನ್ನನ್ನು ಕೊಲ್ಲಲು ನೋಡುವಿರಿ ? " ಎಂದು ಕೇಳಿತು.

" ನೀನು ಅಮೃತದಂತಹ ನೇರಳೇ ಹಣ್ಣು ತಿನ್ನುವುದರಿಂದ ನಿನ್ನ ಗುಂಡಿಗೆಯಲ್ಲಿ ತುಂಬಾ ಅಮೃತ ಸೇರಿದೆಯಂತೆ. ನಿನ್ನ ಗುಂಡಿಗೆಯನ್ನು ತಿಂದರೆ ತನಗೆ ಮುದಿತನವೂ, ಸಾವೂ ಬರುವುದಿಲ್ಲವೆಂದು, ನಿನ್ನನ್ನು ಕರೆದು ತರಲೇಬೇಕೆಂದು ಹಟ ಹಿಡಿದು ಕೂತಿದ್ದಾಳೆ. ಅದಕ್ಕೇ ನಿನ್ನನ್ನು ಕರೆದುಕೊಂಡು ಹೋಗುವುದು.

ಒಳ್ಳೆಯ ಸ್ನೇಹದಿಂದಲೇ ನಿನ್ನನ್ನು ತಿನ್ನುವುದು ತಿಳಿಯಿತೇನಪ್ಪಾ ?" ಎಂದಿತು ಮೊಸಳೆ.

ಕೋತಿಗೆ ದೊಡ್ಡದೊಂದು ಆಲೋಚನೆ ಬಂದಿತು. ಅದು ಮೊಸಳೆಯೊಂದಿಗೆ, "ಮಿತ್ರನೇ, ಈ ಸಂಗತಿಯನ್ನು ಮೊದಲೇ ಏಕೆ ತಿಳಿಸಲಿಲ್ಲ ? ನಾನು ಯಾವಾಗಲೂ ನನ್ನ ಗುಂಡಿಗೆಯನ್ನು ತೆಗೆದು ನೇರಳೇ ಮರದ ಮೇಲೆ ಕೊಂಬೆಗಳ ನಡುವೆ ಭದ್ರವಾಗಿಟ್ಟಿರುತ್ತೇನೆ. ದಿನಾ ಆಗಾಗ ನಾನು ಮರ ಹತ್ತುತ್ತಾ ಇಳಿಯುತ್ತಾ ಇರುವುದು ಏತಕ್ಕೆಂದು ಆಲೋಚಿಸಿರುವೇ ? ಅದು ಭದ್ರವಾಗಿರುವುದೋ ಇಲ್ಲವೋ ನೋಡಲಿಕ್ಕೇ. ಅತ್ತಿಗೆ ಅದನ್ನು ಆಶಿಸುವಳಾದರೆ ಅದಕ್ಕಿಂತ ಹೆಚ್ಚಿನ ಭಾಗ್ಯ ನನಗೇನಿದೆ ? ಅದಕ್ಕಾಗಿ ನನ್ನನ್ನು ಕೊಲ್ಲುವ ಅಗತ್ಯ ಇಲ್ಲ. ಆದರೆ ಈಗ ಅಸಲು ಗುಂಡಿಗೆಯೇ ಇಲ್ಲದ ಬರೀ ನನ್ನನ್ನು ತೆಗೆದುಕೊಂಡು ಹೋಗಿ ಏನು ಲಾಭ ?" ಎಂದಿತು.

ಬುದ್ಧಿಗೇಡಿ ಮೊಸಳೆ ಸಂತೋಷದಿಂದ, "ಹಾಗಾದರೆ ನಾನು ನಿನ್ನನ್ನು ನೇರಳೇ ಮರದ ಕಡೆಗೆ ಹಿಂದೆ ಕರೆದೊಯ್ಯುತ್ತೇನೆ. ನೀನು ನನಗೆ ನಿನ್ನ ಗುಂಡಿಗೆ ಮಾತ್ರ ಕೊಟ್ಟುಬಿಡು. ಅದಿಲ್ಲದೆ ನನ್ನ ಹೆಂಡತಿ ಪಾರಣೆ ಮಾಡುವವಳಲ್ಲ" ಎಂದು ಹೇಳಿ, ಹಿಂದೆ ತಿರುಗಿ ಬಂದು ಕೋತಿಯನ್ನು ನೇರಳೇ ಮರದ ಹತ್ತಿರ ಬಿಟ್ಟಿತು.

ಹಿಂದಿರುಗುವಾಗ, ತನ್ನ ಕ್ಷೇಮಕ್ಕಾಗಿ ಅನೇಕ ದೇವರುಗಳಿಗೆ ಹರಕೆ ಹೇಳಿ ನಮಿಸಿಕೊಂಡಿದ್ದ ಕೋತಿ, ನೇರಳೇ ಮರವನ್ನು ನೋಡಿದ ಕೂಡಲೇ, ಎಂದಿಗೂ ಇಲ್ಲದಷ್ಟು ವೇಗವಾಗಿ ಮರ ಹತ್ತಿ, ಅತ್ಯಂತ ಎತ್ತರವಾದ ಕೊಂಬೆಯನ್ನು ಸೇರಿ, ನಿಟ್ಟುಸಿರುಬಿಟ್ಟು, "ಅಬ್ಬಬ್ಬಾ! ನನ್ನ ಪ್ರಾಣ ಉಳಿಯಿತು. ಅನರ್ಹರನ್ನು ಎಂದಿಗೂ ನಂಬಬಾರದು, ನಂಬತಕ್ಕವರನ್ನು ಕೂಡಾ ಮಿತಿಮೀರಿ ನಂಬಬಾರದೆಂದೂ, ಅಂತಹ ನಂಬಿಗೆ ಆಪತ್ತಿಗೆ ಮೂಲವೆಂದೂ ಸುಮ್ಮನೆ ಹೇಳುವುದಲ್ಲವೆಂದು ತಿಳಿಯಿತು. ಈ ದಿನ ನನಗೆ ಇನ್ನೊಂದು ಜನ್ಮ ಬಂದ ಹಾಗೆ" ಎಂದುಕೊಂಡಿತು.

ಹೀಗೆ ಕೋತಿ ಅಂದುಕೊಂಡಿರುವಾಗ, ಮೊಸಳೆ "ಮಿತ್ರಾ, ನಿನ್ನ ಗುಂಡಿಗೆ ಕೊಟ್ಟುಬಿಟ್ಟರೆ ನಾನು ಅದನ್ನು ನಿನ್ನ ಅತ್ತಿಗೆಗೆ ಕೊಟ್ಟು, ಅವಳ ಉಪವಾಸ ನಿಲ್ಲಿಸುತ್ತೇನೆ, ಬೇಗ ಬಾ" ಎಂದಿತು.

ಕೋತಿ ಎಕ್ಕಳಿಸಿ ನಕ್ಕು, "ಹೋಗೋ, ಹೋಗೊ, ಮೂರ್ಖಾ! ಕೃತಘ್ನಾ! ಯಾರಿಗಾದರೂ ಎರಡು ಗುಂಡಿಗೆ ಇರುವುದೇನು ? ಇಲ್ಲಿಂದ ಕೂಡಲೇ ಓಡಿ ಹೋಗು. ಈ ನೇರಳೇ ಮರದ ನೆರಳಿಗೆ ಮತ್ತೆ ಬರಬೇಡ. ಒಂದು ಸಾರಿ ಮಿತ್ರದ್ರೋಹ ಮಾಡಿದವನು ಮತ್ತೊಂದು ಸಾರಿ ಅದನ್ನೇ ಮಾಡಿದರೆ ತಪ್ಪದೆ ನಾಶವಾಗುವನು!" ಎಂದಿತು.



# ೨೦೦. ೭ ಸಾವಿರ ವರ್ಷಗಳ ಹಿಂದಿನ ಗ್ರಾಮ



ಚೀನಾದ ಆಗ್ನೇಯ ತೀರದಲ್ಲಿರುವ ಚೆಕಿಯಾಗ್ ರಾಷ್ಟ್ರದಲ್ಲಿ ನಡೆದ ಅಗೆತದಲ್ಲಿ ೭ ಸಾವಿರ ವರ್ಷಗಳ ಹಿಂದಿನ ಗ್ರಾಮವು ಹೊರಬಿದ್ದಿದೆ. ಅಲ್ಲಿ ಮರದ ಮನೆಗಳು, ಬತ್ತದ ರಾಶಿಗಳು ಉಮಿಯ ಕುಪ್ಪೆಗಳು ಕಂಡು ಬಂದಿವೆ. ಅಲ್ಲಿಯ ಹಿಂದಿನ ಪ್ರಜೆಗಳು ಎಲುವುಗಳಿಂದಾದ ಪರಿಕರಗಳು ೧,೮೦೦ ದೊರಕಿವೆ. ಎರಡು ಲಕ್ಷ ಮಡಿಕೆ ಚೂರುಗಳು ದೊರಕಿವೆ. ಹೊಲ ಕೆರೆಯುವಂತಹ ಕಳೆಗುದ್ದಲಿಗಳೂ ಸಿಕ್ಕಿವೆ.

ಇಲ್ಲಿ ಕಡೇ ಪಕ್ಷ ೪೮ ಬಗೆಯ ಪ್ರಾಣಿಗಳ ಎಲುವುಗಳು ಕಾಣ ಬಂದಿವೆ. ಅವುಗಳಲ್ಲಿ ಹೆಚ್ಚಾದುವು ಜಿಂಕೆ ಮತ್ತು ಆಮೆಗಳದು. ಉಳಿದವುಗಳಲ್ಲಿ ಪಕ್ಷಿಗಳು, ಮೀನುಗಳು, ಕರಡಿಗಳು, ಕೋತಿಗಳು, ಹುಲಿಗಳು, ಖಡ್ಗಮೃಗಗಳು, ಆನೆಗಳು ಕೂಡಾ ಇವೆ. ಆಗಿನ ಪ್ರಜೆಗಳು ಗುಹೆಗಳ ವಾಸವನ್ನು ಬಿಟ್ಟು ಆಹಾರ ಹುಡುಕುತ್ತ, ವ್ಯವಸಾಯ ಮತ್ತು ಗೃಹನಿರ್ಮಾಣಗಳನ್ನು ೭ ಸಾವಿರ ವರ್ಷಗಳ ಹಿಂದೆಯೇ ಅವಲಂಬಿಸಿದ್ದರೆಂದು ತಿಳಿಯಬಹುದು.













# ಗಂಧದಮರ

ಬೇತಾಳದಷ್ಟೇ ಸಹನೆಯುಳ್ಳ ರಾಜಾ ತ್ರಿವಿಕ್ರಮನು ಮರದಬಳಿಗೆ ಹಿಂದಿರುಗಿ ಕೊಂಬೆಯಲ್ಲಿ ನೇತಾಡುತ್ತಿದ್ದ ಶವವನ್ನು ಕೆಳಗಿಳಿಸಿ ತನ್ನ ಹೆಗಲಲ್ಲೇರಿಸಿಕೊಂಡು, ಎಂದಿನಂತೆ ಮೌನವಾಗಿ ಸ್ಮಶಾನದ ಕಡೆಗೆ ನಡೆಯ ತೊಡಗಿದನು. ಆಗ ಶವದೊಳಗೆ ಸೇರಿಕೊಂಡ ಬೇತಾಳವು ಮಾತಾಡಲು ತೊಡಗಿ, "ಎಲೈ ಮಹಾರಾಜನೇ, ನೀನು ಹೀಗೆ ಶ್ರಮಪಡುವುದನ್ನು ನೋಡಿದರೆ ಯಾರಾದರೂ ನಿನ್ನನ್ನು ಅವಿವೇಕಿ ಅನ್ನಬಹುದು. ಆದರೆ ಕೆಲವುಮಂದಿ ಮೊದಲು ಅವಿವೇಕರ ಹಾಗೆ ಕಂಡುಬಂದರೂ ಆಕಸ್ಮಾತ್ತಾಗಿ ವಿವೇಕವನ್ನು ಪ್ರದರ್ಶಿಸುತ್ತಾರೆ. ಅದಕ್ಕೆ ನಿದರ್ಶನವಾಗಿ ನಿನಗೆ ವಿಕ್ರಮವರ್ಮನೆಂಬ ರಾಜನ ಕಥೆಯನ್ನು ಹೇಳುತ್ತೇನೆ. ದಾರಿಯ ಶ್ರಮ ತಿಳಿಯದಂತೆ ಕೇಳುತ್ತಾ ನಡೆ" ಎಂದು ಹೀಗೆ ಕಥೆ ಹೇಳಲು ತೊಡಗಿತು :

ವಿಕ್ರಮವರ್ಮನು ಮಗಧದೇಶಕ್ಕೆ ರಾಜನಾಗಿದ್ದನು. ಅವನಿಗೆ ವಿಷಕುಂಭನೆಂಬವನು ಮುಖ್ಯಮಂತ್ರಿಯಾಗಿದ್ದನು. ರಾಜನು ಎಷ್ಟು ಒಳ್ಳೆಯವನೋ ಮಂತ್ರಿ ಅಷ್ಟು ದುಷ್ಟನಾಗಿದ್ದನು. ಅವನು

## ಬೇತಾಳಕಥೆಗಳು



ದಿವಾಣದೊಳಗಿನ ಎಲ್ಲಾ ಉದ್ಯೋಗಗಳಿಗೂ, ತನ್ನ ಬಂಧು ಬಳಗದವರನ್ನೂ ಇಷ್ಟ ಮಿತ್ರರನ್ನೂ, ಭೃತ್ಯರನ್ನೂ ನಿಯಮಿಸಿ, ತನ್ನ ಇಷ್ಟಪ್ರಕಾರವೇ ಪ್ರತಿಯೊಂದು ಕೆಲಸವೂ ನಡೆಯುವಂತೆ ಮಾಡಿಬಿಟ್ಟಿದ್ದನು. ರಾಜಾಂಗವು ಅವನ ಇಷ್ಟದಂತೆ ನಡೆಯುತಿತ್ತೇ ಹೊರತು ರಾಜನ ಇಷ್ಟದಂತಲ್ಲ.

ಹೀಗೆ ಬೇರೆ ಕಡೆಯಲ್ಲಿ ಅವನು ಎಷ್ಟೇ ಹಾಳು ಕೆಲಸ ಮಾಡಿದರೂ, ರಾಜನ ಮುಂದೆ ಮಾತ್ರ ತುಂಬಾ ವಿನಯವಿಧೇಯತೆಗಳಿಂದ ನಡೆಯುತ್ತ, ತನ್ನ ನಿಜ ಸ್ವರೂಪವು ರಾಜನಿಗೆ ಸ್ವಲ್ಪ ಕೂಡ ತಿಳಿಯದಂತೆ ಜಾಗರೂಕನಾಗಿದ್ದನು. ತನ್ನ ಮುಖ್ಯ ಮಂತ್ರಿಯಾದವನಿಗೆ ಎಲ್ಲಾ ವಿಷಯಗಳಲ್ಲಿಯೂ ಸ್ವೇಚ್ಛೆಯನ್ನು ಕೊಟ್ಟು ಅವನ ಬುದ್ಧಿವಂತಿಕೆಗಳು ರಾಜ್ಯಕ್ಕೆ ಅನುಕೂಲವಾಗುವಂತೆ ಉಪಯೋಗಿಸಿಕೊಳ್ಳಬೇಕೆಂಬುದು ರಾಜನ ಮತವಾಗಿತ್ತು. ಆದುದರಿಂದ ವಿಷಕುಂಭನನ್ನು ಕುರಿತು ಎಂದಾದರೂ ಏನಾದರೂ ವ್ಯತಿರೇಕವಾದ ಅಭಿಪ್ರಾಯ ಹೊರಟರೂ ರಾಜನು ಅವುಗಳನ್ನು ಅಷ್ಟೇನೂ ಲಕ್ಷಿಸುತ್ತಿರಲಿಲ್ಲ. ಯಾಕೆಂದರೆ, ಒಳ್ಳೆಯವರ ಮೇಲೆ ಕತ್ಸಿತಬುದ್ಧಿಯುಳ್ಳವರು ದೂರು ಹೇಳುವುದು ಸಹಜವೇ ಆದುದರಿಂದ ತನ್ನ ಮಂತ್ರಿ ಎಲ್ಲಾ ಕೆಲಸಗಳನ್ನೂ ಸ್ವೇಚ್ಛೆಯಾಗಿ ಮಾಡಲು ಬಿಟ್ಟಿದ್ದನು.

ರಾಜನು ತನಗೆ ಕೊಟ್ಟ ಸ್ವೇಚ್ಛೆಯನ್ನು ವಿಷಕುಂಭ ಮಂತ್ರಿ ದುರ್ವಿನಿಯೋಗ ಪಡಿಸಿ, ಪ್ರಜೆಗಳ ಜೀವಿತವನ್ನು ಕಷ್ಟಗಳಲ್ಲಿ ನೆನೆಸಿ, ವಸೂಲಾಗುವ ತೆರಿಗೆಗಳಲ್ಲಿ ಸ್ವಲ್ಪ ಭಾಗ ಖಜಾನೆಗೆ ಸೇರದಂತೆ ತಾನೇ ಸ್ವಾಹಾ ಮಾಡುತ್ತಲಿದ್ದನು. ಯಾರಾದರೂ ತನ್ನ ದುಷ್ಟತನವನ್ನು ನಿರೂಪಿಸಬಹುದೆಂದು ತೋರಿದರೆ ಅಂತಹವರನ್ನು ಕೊಲ್ಲಿಸಿ ಉಳಿದವರಿಗೆ ಸಿಂಹಸ್ವಪ್ನವಾಗಿ ಕಾಣುತ್ತಿದ್ದನು. ಪರಿಸ್ಥಿತಿ ಇಲ್ಲಿಯವರೆಗೆ ಬಂದುದರಿಂದ ಮಂತ್ರಿಯನ್ನು ಕುರಿತು ದೂರು ಹೇಳಲು ಅಂಜಿ ಈಗ ಯಾರೂ ಬಾಯಿ ತೆರೆಯುತ್ತಿದ್ದಿಲ್ಲ. ಇದು ಮಂತ್ರಿಯ ಸ್ವೇಚ್ಛಾಚಾರಕ್ಕೆ ಇನ್ನಷ್ಟು ಸೌಕರ್ಯವಾಯಿತು.

ಚಿಕ್ಕಂದಿನಲ್ಲಿ ವಿಕ್ರಮರಾಜನಿಗೆ ವಿದ್ಯೆಗಳನ್ನು ಕಲಿಸಿದ ಗುರುಗಳಾದ ರಾಮಶರ್ಮರಿಗೆ ಮಂತ್ರಿ ಮಾಡುವ ದುಷ್ಟತನಗಳೆಲ್ಲಾ ಚೆನ್ನಾಗಿ ಗೊತ್ತಿತ್ತು. ಎಷ್ಟುಕಾಲವಾದರೂ ರಾಜನು ಮಂತ್ರಿಯ ಮೇಲೆ ಯಾವ ಕ್ರಮವನ್ನೂ ಕೈಕೊಳ್ಳದಿರುವುದನ್ನು ನೋಡಿ, ಮಂತ್ರಿಯ ದುಷ್ಟತನಗಳು ರಾಜನಿಗೆ ಗೊತ್ತಿರಲಾರದೆಂದು ರಾಮಶರ್ಮರಿಗೆ ಅನುಮಾನವಾಯಿತು. ಒಂದುಸಾರಿ ರಾಜನಿಗೆ ಒಂದು ಎಚ್ಚರಿಕೆ ಕೊಡಬೇಕೆಂದುಕೊಂಡು ರಾಮಶರ್ಮರು ಒಂದು ದಿನ ರಾಜನನ್ನು ನೋಡಲು ಬಂದರು.

ರಾಮಶರ್ಮರನ್ನು ನೋಡಿದ ಕೂಡಲೇ ವಿಕ್ರಮರಾಜನು ತನ್ನ ಚಿಕ್ಕಂದಿನ ಗುರುಗಳಿಗೆ ಭಕ್ತಿ ಗೌರವಗಳಿಂದ ಸ್ವಾಗತ ಹೇಳಿ ಕೂಡಿಸಿದನು. ಸ್ವಲ್ಪ ಔಪ

ಚಾರಿಕ ಕುಶಲ ಪ್ರಶ್ನೆಗಳಾದ ಮೇಲೆ ಅವರು ಬಂದ ಕಾರ್ಯವೇನೆಂದು ವಿನಯದಿಂದ ಕೇಳಿದನು.

"ಏನೂ ಇಲ್ಲ. ನಿನ್ನನ್ನು ನೋಡಿ ಬಹಳ ವರ್ಷ ವಾಯಿತು. ನಿನ್ನ ರಾಜ್ಯ ಹೇಗಿದೆ ರಾಜ್ಯಭಾರ ಹೇಗಿದೆ ಎಂಬುದನ್ನು ಪರ್ಯಟನೆ ಮಾಡಿ ನೋಡುತ್ತಾ ಹೀಗೆ ಬಂದೆ." ಎಂದರು ರಾಮ ಶರ್ಮರು.

ಹೀಗೆ ಹೇಳಿ ರಾಮಶರ್ಮರು ಸಭೆಯಲ್ಲಿರುವವ ರೆಲ್ಲರನ್ನೂ ಒಮ್ಮೆ ನೋಡಿದರು.

"ದೇಶವನ್ನೆಲ್ಲಾ ತಿರುಗಾಡಿ ನೋಡುತ್ತ ಬಂದ ನಿಮಗೆ ನನ್ನ ಪರಿಪಾಲನೆಯನ್ನು ಕುರಿತು ಏನು ಅಭಿಪ್ರಾಯ ಕಾಣುತ್ತದೆ? ಜನರೇನು ಹೇಳುತ್ತಾರೆ ಎಂಬುದನ್ನು ದಯವಿಟ್ಟು ಹೇಳಬೇಕು" ಎಂದು ರಾಜನು ರಾಮಶರ್ಮರನ್ನು ಕೇಳಿದನು.

"ಬಹಳ ಚೆನ್ನಾಗಿದೆ. ಪ್ರಜೆಗಳಿಗೆಲ್ಲಾ ಗಂಧದ ಮರದ ಹಾಗೆ ನೆರಳನ್ನು ನೀಡುತ್ತ ನಿನ್ನ ಒಳ್ಳೇ ಗುಣಗಳೆಂಬ ಸುವಾಸನೆಗಳನ್ನು ಹರಡಿಸಿಕೊಂಡಿರುವೆ ಯಲ್ಲಾ!" ಎಂದರು ರಾಮಶರ್ಮರು.

ರಾಜನು ಒಂದೆರಡು ಕ್ಷಣ ಗಂಭೀರವಾಗಿ ಆಲೋ ಚನೆ ಮಾಡಿ "ಗುರುವರ್ಯರೇ ನನ್ನ ಕಣ್ಣಿನ ಪರೆ ಹರಿದಿರಿ. ಧನ್ಯನಾದೆನು" ಎಂದು ಹೇಳಿ, ರಾಮ ಶರ್ಮರನ್ನು ಬೀಳುಗೊಟ್ಟು ಕಳುಹಿಸಿದನು. ಬಳಿಕ ಆ ದಿನವೇ ತನ್ನ ವಿಶ್ವಾಸದ ಸೇವಕರ ಮೂಲಕ ಮಂತ್ರಿ ವಿಷಕುಂಭನನ್ನು ಕುರಿತು ವಿವರಗಳನ್ನು ಸಂಗ್ರಹಿಸಿ, ಮರುದಿನ ಮಂತ್ರಿಯನ್ನು ಪದವಿಭ್ರಷ್ಟ ನನ್ನಾಗಿ ಮಾಡಿದನು.

ಅವನನ್ನು ಬೆಂಬಲಿಸಿದವರೂ ಸೆರೆಮನೆಯನ್ನು ಸೇರಿದರು. ಆಗ ಪ್ರಜೆಗಳಲ್ಲಿ ಹೊರಸೂಸಿದ ಉತ್ಸಾಹವನ್ನು ನೋಡಿ, ರಾಜನು ತಾನು ತೆಗೆದು ಕೊಂಡ ಕಾರ್ಯಕ್ರಮಗಳು ಸರಿಯಾದುವೆಂದು ತಿಳಿದುಕೊಂಡನು.



ಹೀಗೆ ಬೇತಾಳವು ಕಥೆಯನ್ನು ಮುಗಿಸಿ, "ರಾಜಾ ಈ ಕಥೆಯಲ್ಲಿ ನನಗೆ ಸಂದೇಹಗಳಿವೆ. ರಾಜನ ಗುರು ವಾದ ರಾಮಶರ್ಮರು ರಾಜನನ್ನು ಎಚ್ಚರಿಸುವ ಉದ್ದೇಶದಿಂದ ಬಂದವರಷ್ಟೆ? ಅವರು ಮಂತ್ರಿ ಯನ್ನು ಕುರಿತು ಚಕಾರವೆತ್ತಲಿಲ್ಲ, ಅದರ ಮೇಲೆ ರಾಜನ ಪರಿಪಾಲನೆಯನ್ನು ದೂರಲೂ ಇಲ್ಲ; ಅದೇಕೆ? ಇನ್ನೊಂದು ಸಂದೇಹ, ಅಷ್ಟು ಕಾಲ ತನ್ನ ಮಂತ್ರಿಯನ್ನು ಕುರಿತು ಅಪವಾದಗಳನ್ನು ಕೇಳಿ ದಾಗ ಕೂಡಾ, ಮಂತ್ರಿಯ ಮೇಲೆ ಯಾವ ಚರ್ಯೆ ಯನ್ನೂ ತೆಗೆದುಕೊಳ್ಳದೆ, ರಾಮಶರ್ಮರೊಂದಿಗೆ ಬೇರೆ ಯಾವ ವಿಷಯವನ್ನೋ ಮಾತಾಡಿದ ಫಲಿತ ವಾಗಿ ಮಂತ್ರಿಯನ್ನು ತೊಲಗಿಸುವಂತಾದುದು ಹೇಗದು? ಈ ಎರಡು ಅನುಮಾನಗಳಿಗೆ ಸಮಾ ಧಾನ ತಿಳಿದು ಕೂಡಾ ಹೇಳದೆ ಹೋದರೆ ನಿನ್ನ ತಲೆ ಸಿಡಿದು ಹೋಗದಿರದು!" ಎಂದಿತು. ಅದಕ್ಕೆ ತ್ರಿವಿಕ್ರ ಮನು ಹೀಗೆಂದನು:

"ರಾಮಶರ್ಮ ಗುರುಗಳು ತಾವು ಬಂದ ಕೆಲಸವನ್ನು ಸಾಧಿಸಿಬಿಟ್ಟಿದ್ದಾರೆ. ಅವರು ರಾಜನಿಗೆ ನೇರಾಗಿ ಎಚ್ಚರಿಸುವುದಕ್ಕೆ ಬದಲಾಗಿ ವ್ಯಂಗ್ಯರೂಪದಲ್ಲಿ ಎಚ್ಚರಿಕೆ ಹೇಳಿದರು. ಅದಕ್ಕೆ ಅನೇಕ ಕಾರಣಗಳಿವೆ. ಒಂದು, ರಾಮಶರ್ಮರು ರಾಜನನ್ನು ಏಕಾಂತದಲ್ಲಿ ಸಂಧಿಸಿದ್ದಲ್ಲ. ಅಪರೂಪವಾಗಿ ಬಂದ ತನ್ನ ಚಿಕ್ಕಂದಿನ ಗುರುಗಳನ್ನು ರಾಜನು ಸಹಜವಾಗಿ ಹತ್ತು ಮಂದಿ ಹಿರಿಯರ ಸಮಕ್ಷಮದಲ್ಲೇ ಮಾತಾಡಿಸಿದ್ದಾನೆ. ಆಗ ರಾಮಶರ್ಮರು 'ನಾವು ಸ್ವಲ್ಪ ಏಕಾಂತದಲ್ಲಿ ಮಾತಾಡಬೇಕು' ಎಂದು ರಾಜನೊಡನೆ ಹೇಳಿದ್ದರೆ, ಕೂಡಲೇ ಮಂತ್ರಿ ರಹಸ್ಯವನ್ನು ತಿಳಿದುಬಿಡುತ್ತಾನೆ. ಅವನು ಸರ್ವಸ್ವತಂತ್ರನಾಗಿ ವ್ಯವಹರಿಸುವವನಾದುದರಿಂದ ರಾಜನಿಗೆ ಅಪಚಾರ ಮಾಡಿದರೂ ಮಾಡಬಹುದು. ಈ ಕಾರಣಗಳಿಂದ ರಾಮಶರ್ಮರು ತಮ್ಮ ಎಚ್ಚರಿಕೆಯನ್ನು ವ್ಯಂಗ್ಯರೂಪದಲ್ಲಿ ಗೂಢವಾಗಿ ಹೇಳಿದ್ದಾರೆ. ಅಷ್ಟೇ ಅಲ್ಲ, ರಾಜನಲ್ಲಿ ಚಿಕ್ಕಂದಿನಲ್ಲಿದ್ದ ಚುರುಕುತನವೂ ಬುದ್ಧಿವಂತಿಕೆಯೂ ಈಗ ಇದೆಯೋ ಇಲ್ಲವೋ, ಮಧ್ಯ ಕಾಲದಲ್ಲಿ ರಾಜಭೋಗಗಳಿಂದ ಮಂದಮತಿಯಾದನೋ ಹೇಗೆಂದು ಪರೀಕ್ಷಿಸಿದಂತೆಯೂ ಆಯಿತು. ಅವನ ಬುದ್ಧಿ ಈಗಲೂ ಸೂಕ್ಷ್ಮವಾಗಿದ್ದ ಪಕ್ಷದಲ್ಲಿ ಎಚ್ಚರಿಕೆ ಗೂಢವಾಗಿದ್ದರೂ ನಷ್ಟವೇನಿಲ್ಲ. ಹಾಗಲ್ಲದೆ ರಾಜನು ಮಂದಮತಿಯಾಗಿ, ವಿಷಕುಂಭನ ಕೈಯ ಕೀಲುಬೊಂಬೆಯಾಗಿದ್ದರೆ ನೇರಾಗಿ ಎಚ್ಚರಿಸಿದರೂ ಲಾಭವೇನಿಲ್ಲ. ಅದರ ಮೇಲೆ ತನಗೇ ಅಪಾಯವಾಗಲೂಬಹುದು. ಹೀಗೆ ಯಾವ ವಿಧವಾಗಿ ನೋಡಿದರೂ ರಾಮಶರ್ಮರು ಹೇಳಿದ ರೀತಿ ತಿಳಿವಳಿಕೆಯಿಂದ ಕೂಡಿದೆಯೆಂದೇ ಹೇಳಬೇಕು. ಅವರು ಹೇಳತಕ್ಕ ಎಚ್ಚರಿಕೆ ಹೇಳಿಯೇ ಇದ್ದಾರೆ. ಗಂಧದ ಮರದ ನೆರಳಿನಲ್ಲಿ ವಿಷಸರ್ಪಗಳು ಸೇರುತ್ತವೆ. ಅದರ ಸುವಾಸನೆಗಳು ಆ ವಿಷಸರ್ಪಗಳನ್ನೇ ಆಕರ್ಷಿಸುತ್ತವೆ. ಅದು ಆಲದ ಮರದ ಆಶ್ರಯದಂತಿಲ್ಲ. ಈ ಎಚ್ಚರಿಕೆಯನ್ನು ರಾಜನು ಕೂಡಲೇ ತಿಳಿದು ಗುರುವಿಗೆ ಧನ್ಯವಾದಗಳನ್ನು ಹೇಳಿದನು. ರಾಮಶರ್ಮ ಹೇಳಿದುದಕ್ಕೂ, ರಾಜನು ತನ್ನ ಮಂತ್ರಿಯನ್ನು ಕುರಿತು ಈ ಮೊದಲು ಕೇಳಿದ ಅಪವಾದಗಳಿಗೂ ಬಹಳ ವ್ಯತ್ಯಾಸವಿದ್ದಿತು. ರಾಮಶರ್ಮನು ಈ ಎಚ್ಚರಿಕೆಯನ್ನು ವ್ಯಂಗ್ಯವಾಗಿ ಹೇಳಿದುದರಿಂದ ಪರಿಸ್ಥಿತಿ ತೀವ್ರವಾಗಿದೆಯೆಂದು ಕೂಡಾ ರಾಜನಿಗೆ ಗೊತ್ತಾಯಿತು. ಆದುದರಿಂದ ಆ ಕೂಡಲೇ ತಕ್ಕ ಪ್ರತಿಕ್ರಿಯೆ ಮಾಡಿದನು."

ಹೀಗೆ ರಾಜನಿಗೆ ಮೌನಭಂಗವಾದ ಕೂಡಲೇ ಬೇತಾಳವು ಶವದೊಂದಿಗೆ ಮಾಯವಾಗಿ ಹೋಗಿ ಎಂದಿನಂತೆ ಮರದ ಕೊಂಬೆಯನ್ನು ಹಿಡಿದು ನೇತಾಡತೊಡಗಿತು.



# ವಿಚಿತ್ರ ಋಣ

ಒಬ್ಬ ಗೃಹಸ್ಥನು ತನ್ನ ಮಗಳಿಗೆ ಬ್ಯಾಂಡು ಗುದ್ದಿಸಿ ಬಲು ಗೌಜಿಯಿಂದ ಮದುವೆ ಮಾಡಿ ಸಾಲದಿಂದ ದಿವಾಳಿಯಾದನು. ಅವನು ತನ್ನ ಆಸ್ತಿಯನ್ನೆಲ್ಲಾ ಊರೊಳಗಿನ ಹತ್ತು ಮಂದಿ ಹಿರಿಯರ ವಶಕ್ಕೆ ಕೊಟ್ಟು ಸಾಧ್ಯವಾದಷ್ಟು ನ್ಯಾಯದಲ್ಲಿ ತನ್ನ ಸಾಲ ತೀರಿಸುವಂತೆ ಕೇಳಿಕೊಂಡನು.

ಈ ಸಂಗತಿ ತಿಳಿದು ಅವನಿಗೆ ಸಾಲಕೊಟ್ಟವರೆಲ್ಲಾ ಆ ಹಿರಿಯರ ಬಳಿಗೆ ಬಂದು ತಮ್ಮ ತಮ್ಮ ಸಾಲಗಳನ್ನು ನಿರೂಪಿಸಿ ಲೆಕ್ಕ ಬರೆಯಿಸಿಕೊಂಡರು.

ಒಬ್ಬ ದೊಡ್ಡ ಮನುಷ್ಯ ತನಗೆ ಆ ಗೃಹಸ್ಥನಿಂದ ಹದಿನೈದು ರೂಪಾಯಿ ಬರಬೇಕಾಗಿದೆ ಎಂದನು. ತಾನು ಮದುವೆಯಲ್ಲಿ ಹದಿನೈದು ರೂಪಾಯಿ ಉಡುಗೊರೆ ಓದಿಸಿದೆನೆಂದೂ, ಅವನು ದಿವಾಳಿಯಾದುದರಿಂದ ಅದು ತನಗೆ ಈ ಜನ್ಮದಲ್ಲಿ ವಾಪಸು ಉಡುಗೊರೆಯಾಗಿ ಬರುವಂತಿಲ್ಲವೆಂದೂ, ಆದುದರಿಂದ ಅವನು ತನಗೆ ಋಣಪಟ್ಟ ಹಾಗೇ ಎಂದೂ ಆ ದೊಡ್ಡ ಮನುಷ್ಯ ಹೇಳಿದ.

"ದಿವಾಳಿಯಾದವನು ಮದುವೇಲಿ ಭರ್ಜರಿ ಔತಣ ಊಟ ಹಾಕಿದ್ದಾನಂತಲ್ಲ?" ಎಂದು ಹಿರಿಯರು ನಗುತ್ತಾ ಕೇಳಿದರು.

"ಆಹಾ! ಒಂದು ಎಲೆಗೆ ಐದು ರೂಪಾಯಿಯಷ್ಟು ಭೋಜನವಿತ್ತು!" ಎಂದ ದೊಡ್ಡ ಮನುಷ್ಯ.

"ನಿಮ್ಮ ಮನೆಯಿಂದ ಮದುವೆಗೆ ಎಷ್ಟು ಜನ ಹೋಗಿದ್ದಿರಿ?" ಎಂದು ಹಿರಿಯರು ಕೇಳಿದರು.

"ನಾಲ್ಕು ಮಂದಿಗಳು" ಎಂದ ಋಣಪಟ್ಟವ.

"ಹಾಗಾದರೆ ನೀವೇ ಆ ಗೃಹಸ್ಥನಿಗೆ ಐದು ರೂಪಾಯಿ ಬಾಕಿಯಾಗಿದ್ದೀರಿ. ಕೂಡಲೇ ಕೊಟ್ಟುಬಿಡಿ" ಎಂದರು ಹಿರಿಯರು.

ಮಾತಾಡದೆ ಕೊಟ್ಟ ಆ ದೊಡ್ಡ ಮನುಷ್ಯ.





# ವರಪರೀಕ್ಷೆ

ಹಿಂದೆ ಶ್ರೀಪುರದಲ್ಲಿ ಒಬ್ಬ ಜಮೀನ್ದಾರನಿದ್ದ. ಈಶ್ವರಯ್ಯನೆಂದು ಅವನ ಹೆಸರು. ದೊಡ್ಡ ಜಮೀನ್ದಾರನಾದರೂ ಮಹಾ ಲೋಭಿ. ಅವನ ಒಬ್ಬಳೇ ಅಚ್ಚಿಯ ಮಗಳಾದ ಗೌರಿಗೆ ವಿವಾಹದ ವಯಸ್ಸು ಬಂದಿತು. ತನ್ನ ಯಾವತ್ತೂ ಆಸ್ತಿಗೆ ವಾರಸುದಾರಳಾದ ಗೌರಿಗೆ ತಕ್ಕ ಮಿತವ್ಯಯಿಯಾದ ಗಂಡನನ್ನೇ ಆರಿಸಿ ಅವನನ್ನು ಮನೆಯಳಿಯನನ್ನಾಗಿ ಇಟ್ಟುಕೊಳ್ಳಬೇಕೆಂದು ಈಶ್ವರಯ್ಯನ ಉದ್ದೇಶ. ವರನಿಗೆ ಆಡಂಬರ, ಆಟಾಟೋಪಗಳೆಂದೂ ಇರಬಾರದೆಂದು ಜಮೀನ್ದಾರನು ನೋಡುತ್ತಿದ್ದನು. ಅಂದ ಚೆಂದಗಳು ಕೂಡಾ ಅವನಿಗೆ ಮುಖ್ಯವಲ್ಲ.

ಇದನ್ನೆಲ್ಲಾ ಈಶ್ವರಯ್ಯ ಮದುವೇ ದಳ್ಳಾಳಿಗಳಿಗೆ ವಿವರಿಸಿ ಹೇಳಿ, ಇದಕ್ಕೆ ಸರಿಹೋಗುವಂಥ ವರರನ್ನು ಕರೆತರಬೇಕೆಂದನು. ಎಂತೆಂತಹ ಮದುವೆಗಳನ್ನೂ ಆಗ ಗೊಳಿಸಿದ ಪ್ರಚಂಡರಾದ ಪೇರಯ್ಯನವರು ಅನೇಕ ಮಂದಿ ವರರನ್ನು ತಂದರು.

ಒಳಗೆ ಬರುವವರು ಮನೆಯ ಮುಂದಿದ್ದ ದೊಡ್ಡ ಹಂಡೆಯ ನೀರಿನಿಂದ ಕಾಲು ತೊಳೆದುಕೊಂಡು ಬರುತ್ತಿದ್ದರು. ಪೇರಯ್ಯನೊಂದಿಗೆ ಬರುವ ವರಂದಿರು ಕಾಲು ತೊಳೆಯುವುದಕ್ಕೆ ಎಷ್ಟು ತಂಬಿಗೆ ನೀರು ಉಪಯೋಗಿಸುವರೆಂದು ಈಶ್ವರಯ್ಯ ಗಮನಿಸುತ್ತಿದ್ದನು. ನೀರಿನ ಮಿತವ್ಯಯವು ತಿಳಿಯದವನಿಗೆ ಜೀವನದಲ್ಲಿ ಯಾವ ಇತಿಮಿತಿಯೂ ಇರುವುದಿಲ್ಲವೆಂದು ಈಶ್ವರಯ್ಯನ ನಂಬುಗೆ. ಎಲ್ಲರೂ ಲೆಕ್ಕಪಕ್ಕವಿಲ್ಲದೆ ನೀರು ಸುರಿದುಕೊಳ್ಳುವವರೇ. ಈ ಪರಿಮಾಣದಿಂದಾಗಿ ಪೇರಯ್ಯನವರು ತಂದ ಯಾವ ವರನೂ ಈಶ್ವರಯ್ಯನಿಗೆ ಒಪ್ಪಿಗೆಯಾಗಲಿಲ್ಲ.

ಕಡೆಗೆ ಪೇರಯ್ಯನವರಿಗೆ ನಿರಾಶೆಯಾಗಿ ಯಾವ ವರನನ್ನೂ ಕರೆತರಲಾರದೆ ಸುಮ್ಮನಿದ್ದುಬಿಟ್ಟರು. ಇದನ್ನೆಲ್ಲಾ ನೋಡುತ್ತಿದ್ದ ಗೌರಿಗೆ ತನ್ನ ತಂದೆಯ ಧೋರಣೆ ಅರ್ಥವಾಗಲಿಲ್ಲ, ತನಗೆ ಮದುವೆ ಮಾಡುವ ಉದ್ದೇಶ ತಂದೆಗೆ ಇಲ್ಲವೇನೋ ಎಂದುಕೊಂಡಳು. ಏಕೆಂದರೆ ಗೌರಿ ಸಂತೋಷದಿಂದ ಮದುವೆಯಾಗಬಹುದೆಂದುಕೊಂಡ ಯುವಕರನ್ನು ಈಶ್ವರಯ್ಯ ಹಿಂದಿರುಗಿಸಿಬಿಟ್ಟರೆ ಅವಳಿಗೆ ಹೇಗಾಗಬೇಡ? ತಂದೆ ಒಂದುಸಾರಿ ಕೂಡಾ ಮಗಳ ಅಭಿಪ್ರಾಯ ಕೇಳುವ ಗೊಡವೆಗೇ ಹೋಗಲಿಲ್ಲ. ಇನ್ನು ಈ ಜನ್ಮದಲ್ಲಿ ತನಗೆ ಮದುವೆಯಾಗುವುದಿಲ್ಲವೆಂದು

ಜಿ. ನಿರ್ಮಲಾದೇವಿ

ಗಟ್ಟಿ ಮಾಡಿಕೊಂಡು ಗೌರಿ ಒಂದು ದಿನ ತನ್ನ ಗೋಳನ್ನು ಸ್ನೇಹಿತೆಯೊಬ್ಬಳೊಂದಿಗೆ ಹೇಳಿಕೊಂಡಳು.

ಗೌರಿಯ ಸ್ನೇಹಿತೆಯಾದ ಉಮಾ ಎಂಬವಳಿಗೆ ದೂರದ ಬಂಧುವಾದ ಯುವಕನೊಬ್ಬ ಪಕ್ಕದ ಕೋಣೆಯಲ್ಲಿ ಕುಳಿತಿದ್ದ. ಅದನ್ನರಿಯದ ಗೌರಿ ಉಮೆಯೊಂದಿಗೆ ಮನಬಿಚ್ಚಿ ಹೇಳಿದ ಮಾತುಗಳೆಲ್ಲ ಅವನ ಕಿವಿಗೆ ಬಿದ್ದುವು.

ತರುವಾಯ ಎರಡು ದಿನಗಳ ಮೇಲೆ ಪೇರಯ್ಯನವರು ಮತ್ತೊಬ್ಬ ಯುವಕನನ್ನು ಕರೆದುಕೊಂಡು ಈಶ್ವರಯ್ಯನ ಮನೆಗೆ ಬಂದರು. ಪೇರಯ್ಯನವರು ಕಾಲು ತೊಳೆದುಕೊಂಡು ಒಳಗೆ ಬರುವಾಗ ಅವರ ಹಿಂದಿದ್ದ ಯುವಕ, ಕಾಲು ತೊಳೆದುಕೊಳ್ಳದೆಯೇ ಒಳಗೆ ಬಂದನು. ಆ ಯುವಕನ ಪಾದಗಳಿಗೆ ಯಾವುದೋ ಚಿತ್ತು ಕಾಗದಗಳು ಸುತ್ತಿಕೊಂಡಿದ್ದುವು. ಅದನ್ನು ನೋಡಿ ಅವನ ಕಾಲುಗಳಲ್ಲಿ ಏನೋ ಕಜ್ಜಿಗಳಿರಬಹುದೆಂದು ಈಶ್ವರಯ್ಯಗೆ ಅನುಮಾನವಾಯಿತು. ಅವನು ಹೊಸತಾದ ಪಾದರಕ್ಷೆಗಳನ್ನು ಕೈಯಲ್ಲಿ ಹಿಡಿದುಕೊಂಡೇಬಂದಿದ್ದನು.

ಈಶ್ವರಯ್ಯ ಆ ಯುವಕನಿಗೆ ಕಾಲು ತೊಳೆದುಕೊಂಡು ಬರುವಂತೆ ಹೇಳಿದರೂ ಅವನು ಲಕ್ಷ್ಯ ಮಾಡದೆ ಒಳಗೆ ಬಂದು ಕುರ್ಚಿಯಲ್ಲಿ ಕುಳಿತುಬಿಟ್ಟನು. ಅವನಿಗೆ ಕಜ್ಜಿಗಳು ಮಾತ್ರವಲ್ಲದೆ ಕಿವುಡು ಕೂಡಾ ಇರಬೇಕೆಂದು ಈಶ್ವರಯ್ಯನಿಗೆ ತೋರಿತು.

ಆ ಯುವಕನು ಕುಳಿತುಕೊಂಡ ಮೇಲೆ ಪಾದಗಳಿಗೆ ಸುತ್ತಿದ ಚಿತ್ತು ಕಾಗದಗಳನ್ನು ತೆಗೆದುಹಾಕುತ್ತ "ಕಾಲು ತೊಳೆದುಕೊಳ್ಳಲಿಲ್ಲಾ ಅಂತ ಏನೂ ತಿಳಿದುಕೊಳ್ಳಬೇಡಿ. ಹೊರಗೆ ಹೋಗಿ ಒಳಗೆ ಬರುವಾಗಲೆಲ್ಲಾ ಕಾಲು ತೊಳೆದುಕೊಂಡು ನೀರು ಹಾಳು ಮಾಡುವುದಕ್ಕೆ ನನಗಿಷ್ಟವಿಲ್ಲ. ಅದಕ್ಕಾಗಿಯೇ ಪಾದಗಳಿಗೆ ಚಿತ್ತು ಕಾಗದ ಸುತ್ತಿಕೊಳ್ಳುತ್ತೇನೆ." ಎಂದು ಹೇಳಿದನು.

ಅವನ ಪಾದಗಳಿಗೆ ಯಾವ ರೋಗವೂ ಇರಲಿಲ್ಲ. ಅವನಿಗೆ ಕಿವುಡು ಕೂಡಾ ಇಲ್ಲವೆಂದು ಗೊತ್ತಾ



ಯಿತು. "ಚಪ್ಪಲಿಗಳಿವೆಯಲ್ಲಾ, ಮೆಟ್ಟಿಕೊಂಡು ತಿರುಗಬಾರದೇನು ?" ಎಂದು ಕೇಳಿದ ಈಶ್ವರಯ್ಯ.

"ಚಪ್ಪಲಿ ಕೊಂಡುಕೊಂಡದ್ದು ಹಾಕಿಕೊಂಡು ಸವೆಸಲಿಕ್ಕೇನು ?" ಎಂದ ಯುವಕ.

"ಹಾಗಿದ್ದರೆ ಹಣ ಖರ್ಚು ಮಾಡಿ ಚಪ್ಪಲಿ ಕೊಂಡುಕೊಳ್ಳುವ ಅಗತ್ಯವೇನಿತ್ತು ?" ಎಂದು ಈಶ್ವರಯ್ಯ ಕೇಳಿದ.

ಯುವಕನು ಕೋಪ ತಂದುಕೊಂಡು, "ಅದೇನು ಮಾತು ? ಕಾಲಿಗೆ ಮೆಟ್ಟು ಕೂಡಾ ಕೊಂಡುಕೊಳ್ಳಲಾಗದಷ್ಟು ದರಿದ್ರನೆಂದು ನಿಮ್ಮಂಥವರು ಅಂದುಕೊಂಡಾರಪ್ಪೆ ? ಅದಕ್ಕಾಗಿ ಮೆಟ್ಟುಗಳನ್ನು ಕೈಯಲ್ಲಿ ಹಿಡಿದುಕೊಂಡೇ ತಿರುಗುತ್ತೇನೆ. ಕಾಲಿನಿಂದ ಹೊರುವುದೊಂದು ದೊಡ್ಡದು, ಕೈಯಿಂದ ಹೊತ್ತರೆ ಸಣ್ಣದು ಹೇಗಾಗುತ್ತೆ ಹೇಳಿ ?" ಎಂದನು.

ಈಶ್ವರಯ್ಯನಿಗೆ ಯುವಕನ ಮಿತಬುದ್ಧಿ ನೋಡಿ ತಲೆ ತಿರುಗಿತು. ಆದರೂ ಇನ್ನೊಂದು ಸಂದೇಹ ಉಳಿದಿತ್ತು. ಅದನ್ನೂ ಕೇಳಿಬಿಟ್ಟನು. "ಅಪ್ಪಾ, ನೀನು ಕೋಪ ಮಾಡಿಕೊಳ್ಳದಿದ್ದರೆ ಇನ್ನೊಂದು ಮಾತು ಕೇಳುತ್ತೇನೆ. ಈ ಚಿತ್ತು ಕಾಗದಗಳಾದರೂ ಸುಮ್ಮನೆ ಬರುವುದಿಲ್ಲವಷ್ಟೇ? ಅವುಗಳಿಗೂ ಏನೋ ಒಂದು ಬೆಲೆ ಇದ್ದೇ ಇದೆ ಹೌದಾ ? ಅವುಗಳನ್ನು ಕಾಲಿಗೆ ಸುತ್ತಿ ವೃಥಾ ಹಾಳು ಮಾಡುವುದು..." ಎಂದು ಅವನು ಹೇಳುವಷ್ಟರಲ್ಲಿ, ಯುವಕನು ನಡುವೇ ಬಾಯಿ ಹಾಕಿ, "ತಿಳಿಯಿತು ಬಿಡಿ. ನೀವು ಇನ್ನೂ ಎಲ್ಲೋ ಅರೆಗತ್ತಲೆಯಲ್ಲೇ ಇದ್ದೀರಿ. ದಿನಾ ನನಗೆ ಅಡಿಗೆ ಹೇಗಾಗುತ್ತದೆಂದು ಮಾಡಿದಿರಿ ? ಈ ಚಿತ್ತು ಕಾಗದಗಳಿಂದಲೇ. ಇದನ್ನೆಲ್ಲ ಸುರುಳಿಯಾಗಿ ಒಲೆಗಿಟ್ಟರೆ ನಿಧಾನವಾಗಿ ಬೆಂಕಿ ಉರಿಯುತ್ತದೆ ಗೊತ್ತಾ !" ಎಂದನು.

ಈಶ್ವರಯ್ಯನಿಗೆ ಸ್ವಲ್ಪ ಹೊತ್ತು ಬಾಯಿಂದ ಮಾತೇ ಹೊರಡಲಿಲ್ಲ. ತರುವಾಯ ಹೆಚ್ಚು ಹೇಳುವುದೇನಿದೆ? ಜಮೀನ್ದಾರನು ತನ್ನ ಮಗಳು ಗೌರಿಯನ್ನು ಆ ಯುವಕನಿಗೇ ಕೊಟ್ಟು ಮದುವೆ ಮಾಡಿದನು.

ಜಮೀನ್ದಾರನಿಗೆ ತನ್ನ ಅಳಿಯನ ನಿಜರೂಪ ಗೊತ್ತಿರಲಿಲ್ಲ. ಆ ಯುವಕನ ಹೆಸರು ರಮೇಶ. ಅವನು ವಧು ನೋಡಲು ಬರುವ ಮೊದಲು, ಈಶ್ವರಯ್ಯನ ಜಿಪುಣತನವನ್ನು ಕುರಿತು ವಿಚಾರಿಸಿ ತಿಳಿದುಕೊಂಡಿದ್ದನು. ಎಷ್ಟು ಒಳ್ಳೆಯ ಸಂಬಂಧಗಳನ್ನು ಕೂಡಾ ಈಶ್ವರಯ್ಯ ಏಕೆ ಹಿಂದಿರುಗಿಸಿದನೆಂದು ಸರಿಯಾಗಿ ಊಹಿಸಿ, ಈಶ್ವರಯ್ಯನ ದೌರ್ಬಲ್ಯಕ್ಕೆ ತಕ್ಕ ಮದ್ದಿನ ಪಥಕ ಆಲೋಚಿಸಿಕೊಂಡು, ಪೇರಯ್ಯನವರ ಸಹಾಯದಿಂದ ಅದನ್ನು ಪ್ರಯೋಗಿಸಿ ಗೌರಿಯ ಗಂಡನಾಗಿ ಭಾವೀ ಜಮೀನ್ದಾರನೂ ಆದನು.





# ಪಿಶಾಚಿನಾಟಕ

ಒಂದು ಊರಿನಲ್ಲಿ ರಂಗಯ್ಯಶೆಟ್ಟಿ ಎಂಬವನು ಊರವರೊಂದಿಗೆ ಹಣದ ಲೇವಾದೇವಿ ನಡೆಸುತ್ತಿದ್ದನು. ಊರವರಿಂದ ಬಡ್ಡಿಗೆಬಡ್ಡಿ ವಸೂಲು ಮಾಡಿ ಅಪಾರ ಹಣವನ್ನು ಸಂಪಾದಿಸಿ ಅದನ್ನೆಲ್ಲಾ ಮಗನಾದ ಗೋವಿಂದಶೆಟ್ಟಿಗೆ ಒಪ್ಪಿಸಿಕೊಟ್ಟು, ಕಣ್ಣು ಮುಚ್ಚಿದನು.

ತಂದೆಯ ಹತ್ತಿರ ಎಷ್ಟು ಹಣ ಉಂಟೆಂಬುದು ಅದುವರೆಗೂ ಮಗನಿಗೆ ಗೊತ್ತಿರಲಿಲ್ಲ. ತಂದೆ ಸತ್ತ ಮೇಲೆ ಗೋವಿಂದಶೆಟ್ಟಿ ತಂದೆ ತನಗೆ ಕೊಟ್ಟ ಬೀಗದ ಕೈಯಿಂದ ಕಬ್ಬಿಣದ ಪೆಟ್ಟಿಗೆಯನ್ನು ತೆರೆದು ನೋಡಿದನು. ಅದರೊಳಗಿದ್ದ ಬೆಳ್ಳಿ, ಬಂಗಾರ ಆಭರಣಗಳನ್ನೆಲ್ಲ ರಾಶಿ ಹಾಕಿ ನೋಡಿದಾಗ, ಅವನ ಗುಂಡಿಗೆ ಗಡಗಡ ನಡುಗಿತು. ಇಷ್ಟೊಂದು ಧನವನ್ನು ಕಳ್ಳರಿಂದ ಕಾಪಾಡಿಕೊಳ್ಳುವುದು ಬಾಳೇ ಹಣ್ಣು ತಿಂದ ಹಾಗಲ್ಲವೆನಿಸಿತು.

ಈ ಧನವನ್ನು ಕ್ಷೇಮವಾಗಿರಿಸಲು ಗೋವಿಂದಶೆಟ್ಟಿಗೆ ಒಂದು ಆಲೋಚನೆ ಹೊಳೆಯಿತು. ಆ ಧನವನ್ನೆಲ್ಲಾ ಎರಡು ಬಿಂದಿಗೆಗಳಲ್ಲಿ ತುಂಬಿಸಿ ಮುಚ್ಚಿ ಭದ್ರಪಡಿಸಿಟ್ಟನು. ಅರ್ಧರಾತ್ರಿಯ ಹೊತ್ತಿನಲ್ಲಿ ಆ ಬಿಂದಿಗೆಗಳನ್ನು ತೆಗೆದುಕೊಂಡು ಹೋಗಿ ಊರಿನ ಹೊರಗಿದ್ದ ದೆವ್ವಗಳ ಆಲದಮರದ ಬುಡದಲ್ಲಿ ಹೊಂಡ ತೆಗೆದು ಹುಗಿದಿಟ್ಟನು.

ಆ ಆಲದಮರದ ಮೇಲೆ ದೆವ್ವಗಳಿವೆಯೆಂಬ ಪ್ರತೀತಿ ಇದ್ದುದರಿಂದ ರಾತ್ರಿಯ ಹೊತ್ತಿನಲ್ಲಿ ಆ ಕಡೆಗೆ ಯಾರೂ ಬರುವುದಿಲ್ಲ. ತನ್ನ ಧನವನ್ನು ರಕ್ಷಿಸಿಕೊಳ್ಳಲಿಕ್ಕಾಗಿ ಗೋವಿಂದಶೆಟ್ಟಿ ಪಿಶಾಚಿಗಳ ಭಯವನ್ನು ದೂರ ಸರಿಸಿ, ತಾನೇ ಒಂದು ಪಿಶಾಚಿಯ ಪಾತ್ರವನ್ನೂ ಧರಿಸಿದನು.

ಏಕೆಂದರೆ ಹುಗಿದಿಟ್ಟರೂ ಅವನಿಗೆ ಭದ್ರತೆ ಎನಿಸಲಿಲ್ಲ. ತಾನು ಹುಗಿದಿಟ್ಟ ಧನಕ್ಕೆ ರಾತ್ರಿಯ ಹೊತ್ತಿನಲ್ಲಿ ತಾನೇ ಕಾವಲೂ ಕಾಯಬೇಕಾಯಿತು. ಅಂತೆಯೇ ಗೋವಿಂದಶೆಟ್ಟಿ ಕತ್ತಲೆ ಬಿದ್ದ ಮೇಲೆ, ಯಾರಿಗೂ ಗೊತ್ತಾಗದಂತೆ, ತಲೆಯಿಂದ ಕಾಲಿನವರೆಗೂ ಬಿಳೀಬಣ್ಣದ ಮುಸುಗಿನ ಬಟ್ಟೆದರಿಸಿ, ಪಿಶಾಚಿಯ ವೇಷದಲ್ಲಿ, ಕಾಲಿಗೆ ಗೆಜ್ಜೆಯನ್ನೂ ಕಟ್ಟಿಕೊಂಡು ಚಿತ್ರ ವಿಚಿತ್ರವಾಗಿ ಧ್ವನಿಮಾಡುತ್ತ ಆಲದಮರದ ಬುಡದಲ್ಲಿ ಆಚೀಚೆ ಎಡತಾಕಿಕೊಂಡಿದ್ದನು. ಹೀಗೆ ಇಡೀ ರಾತ್ರಿ ಜಾಗರಣೆ ತಿರುಗಿ, ಬೆಳಗಾಗು

ಬಿ. ಎನ್. ರಾವ್



ವಪ್ಪರೊಳಗೆ ಯಾರಿಗೂ ತಿಳಿಯದಂತೆ ಬೇರೊಂದು ಬಟ್ಟೆಹೊದ್ದು ಬಂದು ತನ್ನ ಮನೆ ಸೇರಿಬಿಡುತ್ತಿದ್ದನು.

ಆಲದಮರದ ಬುಡದಲ್ಲಿ ಯಾವುದೋ ದೆವ್ವ ಎಡತಾಕುತ್ತಿರುವುದೆಂದು ಪುಕಾರು ಹುಟ್ಟಿತು. ತನ್ನ ತಂದೆ ಪಿಶಾಚಿಯಾಗಿ, ಆಲದಮರವನ್ನು ಆಶ್ರಯಿಸಿರುವನೆಂದು ಗೋವಿಂದಶೆಟ್ಟಿ ಊರೊಳಗೆಲ್ಲಾ ಪ್ರಚಾರ ಮಾಡಿದನು.

ಅದುವರೆಗೆ ಆಲದಮರದ ಮೇಲೆ ಪಿಶಾಚಿಗಳಿರುವವೆಂದು ಪ್ರತೀತಿಯೇ ಹೊರತು ಕಣ್ಣಾರೆ ನೋಡಿದವರಿಲ್ಲ. ಈಗ ಪಿಶಾಚಿಯನ್ನು ಸ್ವಂತ ಕಣ್ಣುಗಳಿಂದ ನೋಡಿದವರಿದ್ದಾರೆ. ರಂಗಯ್ಯಶೆಟ್ಟಿ ಪಿಶಾಚಿಯಾಗಿ ಆಲದಮರವನ್ನು ಆಶ್ರಯಿಸಿರುವನೆಂಬ ನಂಬುಗೆ ಊರೆಲ್ಲಾ ಹರಡಿತು.

ಈ ಕಾರಣದಿಂದ ಕತ್ತಲೆಯಾದ ಮೇಲೆ ಮನೆಯಿಂದ ಹೊರಗೆ ಹೋಗಲು ಎಲ್ಲರೂ ಹೆದರುತ್ತಿದ್ದರು. ಆಲದ ಮರದಲ್ಲಿ ಪಿಶಾಚಿ ಇದೆಯೆಂಬುದನ್ನು ನೋಡಿದ ಕೆಲವರಿಗೆ ಜ್ವರ ಹಿಡಿಯಿತು. ರಂಗಯ್ಯಶೆಟ್ಟಿಯ ಪಿಶಾಚಿಯನ್ನು ಕುರಿತು ಕಡ್ಡಿಯನ್ನು ಗುಡ್ಡವಾಗಿಸಿದಂತೆ ಮಾತಾಡತೊಡಗಿದರು. ಬದುಕಿದ್ದಾಗ ಬಡ್ಡಿ ಹೀರಿದ ರಂಗಯ್ಯಶೆಟ್ಟಿ ಸತ್ತು ಪಿಶಾಚಿಯಾಗಿ ನಿತ್ಯ ಊರವರನ್ನು ನಡುಗಿಸಿಕೊಂಡಿದ್ದ. ಎಲ್ಲರೂ ಈ ಪಿಶಾಚಿಯಿಂದ ಎಂದಿಗೆ ಬಿಡುಗಡೆಯೋ ಎಂದು ದೇವರನ್ನು ಬೇಡಿಕೊಳ್ಳುತ್ತಿದ್ದರು.

ಊರೊಳಗಿನ ಸ್ಥಿತಿಗತಿಗಳು ಅಸ್ತವ್ಯಸ್ತವಾದುವು. ಹೊಲಗದ್ದೆಗಳಿಗೆ ರಾತ್ರಿಯಲ್ಲಿ ಕಾವಲು ಕಾಯುವವರಿಲ್ಲ. ಎಲ್ಲೆಲ್ಲಿದ್ದ ಯಾವ ಯಾವ ಕಳ್ಳರೋ ಬಂದು ಬೆಳೆಗಳನ್ನು ಕದ್ದುಕೊಂಡು ಹೋದರು. ಊರೊಳಗೆ ಯಾವ ಮನುಷ್ಯನಿಗಾಗಲೀ, ಪ್ರಾಣಿಗಳಿಗಾಗಲೀ ರೋಗ ಬಂದರೆ, ಸಾವು ಬಂದರೆ ಅದೆಲ್ಲಾ ರಂಗಯ್ಯಶೆಟ್ಟಿಯ ಪಿಶಾಚಿಯ ಕೆಲಸವೇ ಎಂದು ನಂಬುವಂತಾಯಿತು. ಗ್ರಾಮದ ಜೀವನವೇ ಕೆಟ್ಟಿತು.

ಹೀಗೆ ಗ್ರಾಮದಲ್ಲಿ ದಾರಿದ್ರ್ಯವು ತಾಂಡವಿಸುತ್ತಿರುವಾಗ ಗೋವಿಂದಶೆಟ್ಟಿಗೆ ಲಾಭವೇ ಆಯಿತು. ತನ್ನ ಹತ್ತಿರವಿದ್ದ ಸರಕನ್ನು ಹೆಚ್ಚು ಬೆಲೆಗೆ ಮಾರಿ ಅವನು ಇನ್ನಷ್ಟು ಲಾಭ ಹೊಡೆಯಲಾರಂಭಿಸಿದನು. ಅವನು ಗ್ರಾಮಸ್ಥರ ಮೇಲೆ ಸ್ವಲ್ಪವೂ ಕನಿಕರವಿಲ್ಲದೆ, ತನ್ನ ಪಿಶಾಚಿ ವೇಷವನ್ನೂ ಬಿಡದೆ ತನ್ನ ಸೊತ್ತನ್ನು ಕಾವಲು ಕಾಯುತ್ತಲೇ ಇದ್ದನು.

ಇಂತಹ ನಿಕೃಷ್ಟ ಸ್ಥಿತಿಗೆ ಆ ಊರು ಬಂದಾಗ, ಚಿನ್ನಪ್ಪನು ತನ್ನ ನಾಯಿಯೊಂದಿಗೆ ಆ ಊರಿನೊಳಗೆ ಕಾಲಿಟ್ಟನು. ಆಗ ಅವನ ಕಿವಿಗೆ ಮೊದಲು ಬಿದ್ದ ಸುದ್ದಿ ರಂಗಯ್ಯಶೆಟ್ಟಿಯ ಪಿಶಾಚಿಯನ್ನು ಕುರಿತೇ. ಆ ಪಿಶಾಚಿಯಿಂದಾಗಿ ಗ್ರಾಮಕ್ಕೆ ಬಡೆದ ದುರ್ಗತಿಯನ್ನು ನೋಡಿದನು. ಕಿವಿ ತುಂಬಾ ಕೇಳಿದನು. ಅವನಿಗೆ ಬಹಳ ಸಂಕಟವೆನಿಸಿತು.

ಜನರಿಗೆ ಪಿಶಾಚಿಗಳ ಭಯವಿಲ್ಲದಂತೆ ಮಾಡಿದರೆ ಹೊರತು ಅವರ ಜೀವಿತವು ಚೆನ್ನಾಗದೆಂದು ಅವನಿಗೆ

ತೋರಿತು. ತಾನು ಆ ಭಯ ನಿವಾರಣೆಯ ಕೆಲಸಕ್ಕೆ ತಲೆಹಾಕುವುದಕ್ಕೆ ಮೊದಲು, ರಂಗಯ್ಯಶೆಟ್ಟಿಯ ಪಿಶಾಚ ರೂಪವನ್ನು ಕಣ್ಣಾರೆ ಕಂಡು ಬಿಡಬೇಕೆಂದು ಕೊಂಡನು. ಅದರ ಹಾವಭಾವಗಳನ್ನು ನೋಡಿದ ಮೇಲೆ ಅದಕ್ಕೇನಾದರೂ ಪರಿಹಾರ ಹುಡುಕಬೇಕು, ಎಂದುಕೊಂಡನು.

ಆ ದಿನ ಹೊತ್ತು ಮುಳುಗುವಾಗ, ಯಾರಿಗೂ ಕಾಣದಂತೆ ಅವನು ನಿರ್ಜನವಾಗಿದ್ದ ಆಲದಮರದ ಹತ್ತಿರ ಹೋಗಿ, ಅದರ ಮೇಲೆ ಹತ್ತಿ ಕುಳಿತು ಕೊಂಡನು. ಸುಮಾರು ಅರ್ಧ ರಾತ್ರಿಯಾಗುವಾಗ ಗೋವಿಂದ ಶೆಟ್ಟಿ ಮುಸುಗು ಹಾಕಿಕೊಂಡು ಪಿಶಾಚಿ ವೇಷ ಧರಿಸಿ ಎಡತಾಕುವುದನ್ನು ಚಿನ್ನಪ್ಪನು ನೋಡಿದನು.

ಯಾವನೋ ಒಬ್ಬ ರಂಗಯ್ಯ ಶೆಟ್ಟಿಯ ಪಿಶಾಚಿ ಯಂತೆ ವೇಷ ಹಾಕಿಕೊಂಡು ಜನರನ್ನು ಭಯ ಭ್ರಾಂತಿ ಗೊಳಿಸುತ್ತಿದ್ದಾನೆ. ಏಕೆ ಹೀಗೆ? ಇದರಲ್ಲಿ ಆ ಮನುಷ್ಯನ ಸ್ವಾರ್ಥವೇನೋ ಇರಬೇಕು. ತನ್ನ ಸ್ವಾರ್ಥಕ್ಕಾಗಿ ಊರ ಜನರನ್ನು ನಾನಾ ಕ್ಷೋಭೆಗಳಿಗೆ ಗುರಿ ಮಾಡುವ ಈ ಕಿರಾತಕನನ್ನು ಬಿಡಲೇಬಾರದು. ಜನರ ಎದುರಿನಲ್ಲೇ ಇವನು ಬುದ್ಧಿ ಕಲಿಯುವಂತೆ ಮಾಡಬೇಕು.

ಬೆಳಂಜಾವದಲ್ಲಿ ಗೋವಿಂದ ಶೆಟ್ಟಿ ಮನೆಗೆ ಹಿಂದಿರುಗಿ ಬಂದಾಗ ಚಿನ್ನಪ್ಪನು ಅವನ ಹಿಂದೆಯೇ ಬಂದು, ಆ ಮನೆಯ ಪೂರ್ವೋತ್ತರಗಳನ್ನು ಕುರಿತು ಸುದ್ದಿ ಸಂಗ್ರಹ ಮಾಡಿಕೊಂಡನು. ಗೋವಿಂದ ಶೆಟ್ಟಿ ರಂಗಯ್ಯ ಶೆಟ್ಟಿಯ ಮಗನೇ ಎಂದೂ, ರಂಗಯ್ಯ ಶೆಟ್ಟಿ ಅಪಾರ ಧನ ಸಂಪಾದಿಸಿ ಸತ್ತು ಹೋದ ನೆಂದೂ, ಈಗ ಅವನು ಪಿಶಾಚಾಗಿ ಆಲದ ಮರದ ಪ್ರಾಂತದಲ್ಲಿರುವನೆಂದೂ ಊರವರು ಚಿನ್ನಪ್ಪನಿಗೆ ಹೇಳಿದರು.

ತನ್ನ ತಂದೆ ಪಿಶಾಚಿಯಾದನೆಂದು ಪ್ರಚಾರ ಮಾಡಿ, ಆ ವೇಷದಿಂದ ತಾನು ಪ್ರಜೆಗಳನ್ನು ಹೆದರಿಸು ವುದರಲ್ಲಿ ಗೋವಿಂದ ಶೆಟ್ಟಿಯ ಅಭಿಪ್ರಾಯ ಏನಿರ ಬಹುದೆಂದು ಚಿನ್ನಪ್ಪನು ತೀವ್ರವಾಗಿ ಆಲೋಚಿಸಿ





ದನು. ತನ್ನ ಮನೆಯಲ್ಲಿರುವ ಧನ ರಾಶಿಯನ್ನು ಕಳ್ಳರು ದೋಚಿಕೊಳ್ಳುವರೆಂಬ ಭಯ ಕೂಡಾ ಇಲ್ಲದೆ ಆಲದಮರದ ಬುಡದಲ್ಲೇ ಇರುವನೆಂದರೆ, ಏನರ್ಥ? ಮನೆ ಕಾಯುವುದಕ್ಕೆ ಬದಲು ಮರವನ್ನು ಕಾಯುವನೇಕೆ?

ಆ ದಿನ ಹೊತ್ತು ಮುಳುಗಿ ಮುಂಗತ್ತಲೆ ಯಾದಾಗ, ಚಿನ್ನಪ್ಪನು ಗಡ್ಡ ಮೀಸೆಗಳನ್ನಿಟ್ಟು ಕೊಂಡು ಗೋವಿಂದ ಶೆಟ್ಟಿಯ ಮನೆಗೆ ಬಂದು, "ರಂಗಯ್ಯ ಶೆಟ್ಟಿ! ರಂಗಯ್ಯ ಶೆಟ್ಟಿ!" ಎಂದು ಕರೆಯುತ್ತಾ ಬಾಗಿಲು ತಟ್ಟಿದನು.

ಗೋವಿಂದ ಶೆಟ್ಟಿ ಬಾಗಿಲು ತೆರೆದು, "ಯಾರು ನೀನು? ಏನು ಬೇಕು?" ಎಂದು ಕೇಳಿದನು.

"ನಾನು ಜೋಗೇಂದ್ರನ ಮಗ. ರಂಗಯ್ಯ ಶೆಟ್ಟೀನ ನೋಡಬೇಕಾಗಿತ್ತು. ಅವರನ್ನು ಸ್ವಲ್ಪ ಕರೆಯಪ್ಪಾ" ಎಂದು ಚಿನ್ನಪ್ಪ ಕುರ್ಚಿಯ ಮೇಲೆ ಕುಳಿತುಕೊಂಡನು.

ಚಿನ್ನಪ್ಪನ ಕೃತ್ಯಗಳಿಂದ ಗೋವಿಂದ ಶೆಟ್ಟಿ ಬೆರಗಾಗಿ, "ಅವರು ನನ್ನ ತಂದೆ. ತೀರಿ ಹೋಗಿ ಬಹಳ ದಿನಗಳಾದುವು. ಅವರೊಂದಿಗೆ ನಿಮಗೇನು ಕೆಲಸ? ಯಾರು ನೀವು? ಎಲ್ಲಿಂದ ಬಂದಿರಿ?" ಎಂದು ಕೇಳಿದನು.

ಚಿನ್ನಪ್ಪನು ಮುಖದಲ್ಲಿ ಚಿಂತೆಯನ್ನು ತಂದುಕೊಂಡು, "ನಾವು ನಗರದಲ್ಲಿರುವವರು. ನನ್ನ ತಂದೆಗೆ ನಿನ್ನ ತಂದೆಯವರು ಲಕ್ಷ ವರಹ ಬಾಕಿ ಕೊಡಬೇಕಾಗಿದೆ. ಯಾವ ಸುದ್ದಿಯೂ ಇಲ್ಲದ್ದರಿಂದ ಅದನ್ನು ಕೇಳೋಣವೆಂತಲೇ ಬಂದೆ. ಆ ಹಣ ಕೊಟ್ಟು ನನ್ನನ್ನು ಕಳುಹಿಸುವ ಏರ್ಪಾಡು ಮಾಡು, ನನಗೆ ಬೇಗನೇ ಹೋಗಬೇಕು" ಎಂದನು.

ಗೋವಿಂದ ಶೆಟ್ಟಿ ಮೆಟ್ಟಿಬಿದ್ದು, "ಆ! ಏನಂದಿರಿ? ನಮ್ಮ ತಂದೆ ನಿಮ್ಮ ತಂದೆಗೆ ಲಕ್ಷ ವರಹಾ ಬಾಕಿಯೇ? ಆ ಹಣ ನಾನು ಕೊಡಬೇಕೇ? ಚೆನ್ನಾಗಿದೆ! ಇರಲಿಕ್ಕೆ ಈ ಮನೆಯೊಂದರ ಹೊರತು ನನ್ನ ಹತ್ತಿರ ಬೇರೆ ಚಿಕ್ಕಾಸು ಕೂಡಾ ಇಲ್ಲ. ಬೇಕಾದರೆ ನೋಡಿಕೊಳ್ಳಿ. ನನಗೆ ಒಂದೊಂದು ದಿನ ದೂಡುವುದೇ ಬ್ರಹ್ಮ ಪ್ರಯತ್ನವಾಗಿದೆ" ಎಂದು ಹೇಳಿ ಚಿನ್ನಪ್ಪನಿಗೆ ಮನೆಯಲ್ಲಿದ್ದ ಪ್ರತಿ ಪೆಟ್ಟಿಗೆಯನ್ನೂ ತೋರಿಸಿದನು.

ಎಲ್ಲಾ ನೋಡಿದ ಮೇಲೆ ಚಿನ್ನಪ್ಪನಿಗೆ ಸಂಗತಿ ಏನೆಂಬುದು ಸ್ಪಷ್ಟವಾಯಿತು. ಗೋವಿಂದ ಶೆಟ್ಟಿ ತನಗಿದ್ದುದನ್ನೆಲ್ಲಾ ದೆವ್ವದ ಆಲದ ಮರದ ಸಮೀಪದಲ್ಲೆಲ್ಲೋ ಅಡಗಿಸಿಟ್ಟು ರಾತ್ರಿಯ ಹೊತ್ತಿನಲ್ಲಿ ಪಿಶಾಚಿ ವೇಷ ಧರಿಸಿ ಅಲ್ಲಿ ಕಾವಲು ಕಾಯುತ್ತಿದ್ದಾನೆಂದಾಯಿತು. ಆ ಕಡೆಗೆ ಯಾರೂ ಬಾರದಂತೆ ನೋಡಿಕೊಳ್ಳುತ್ತಿದ್ದಾನೆ!

ಇಷ್ಟು ಅರ್ಥ ಮಾಡಿಕೊಂಡು ಚಿನ್ನಪ್ಪನು "ನೋಡಪ್ಪಾ, ಗೋವಿಂದ ಶೆಟ್ಟಿ, ಸಾಲ ಅಂದ ಮೇಲೆ ಅದು ಸಾಲವೇ. ನಿನ್ನ ಮನೇ ಹೊಲ ಮಾರಿ

ಯಾದರೂ ನನ್ನ ತಂದೆಯ ಬಾಕಿಯನ್ನು ತೀರಿಸ ಬೇಕಾದ್ದು ಮಗನ ಕರ್ತವ್ಯ. ನನ್ನ ತಂದೆಯ ಸಂಗತಿ ನಿನಗೆ ಗೊತ್ತಿಲ್ಲ! ಅವರು ಸತ್ತರೂ ಬಿಡುವವ ರಲ್ಲ!" ಎಂದು ಬೆದರಿಸಿದನು.

ಗೋವಿಂದ ಶೆಟ್ಟಿ ಕೋಪದಿಂದ, "ಇನ್ನೊಂದು ಸಾರಿ ಹೀಗೆ ಹೇಳಿದರೆ ನಿನ್ನ ಪ್ರಾಣ ಉಳೀಲಿಕ್ಕಿಲ್ಲ. ನನ್ನ ತಂದೆ ಈಗ ಪಿಶಾಚಿಯಾಗಿ ತಿರುಗುತ್ತಿದ್ದಾರೆ ಗೊತ್ತಾ? ರಂಗಯ್ಯ ಶೆಟ್ಟಿಯ ಪಿಶಾಚಿ ಅಂತ ಹೇಳಿ ದರೆ ಸಾಕು ಈ ಪ್ರಾಂತದಲ್ಲಿದ್ದ ಕಪ್ಪೆಗಳು ಕೂಡಾ ನೀರು ಕುಡೀಲಿಕ್ಕಿಲ್ಲ. ನಿನ್ನ ಜೋಗೀಂದ್ರ ಏನು ಮಾಡಿಯಾನು? ಹೆಚ್ಚು ಮಾತು ಹಾಳು ಮಾಡದೆ ಬಂದ ದಾರಿ ಹಿಡಿದು ಹೋಗಿಬಿಡು!" ಎಂದನು.

ಚಿನ್ನಪ್ಪನು ಗಹಗಹಸಿ ನಕ್ಕು, "ಅದುವೋ ನಿನ್ನ ಧೈರ್ಯ? ನನ್ನ ತಂದೆ ಕೂಡಾ ಸತ್ತು ಪಿಶಾಚಿ ಯಾಗಿ ನಮ್ಮ ಪ್ರಾಂತದಲ್ಲಿ ಪ್ರಳಯ ತಾಂಡವ ಮಾಡುತ್ತಿದ್ದಾರೆ. ಪಿಶಾಚಿಯಾದ ಮೇಲೆ ತನಗೆ ಬರ ಬೇಕಾದ ಬಾಕಿಗಳನ್ನೆಲ್ಲಾ ಒಂದೊಂದಾಗಿ ವಸೂಲು ಮಾಡುತ್ತಿದ್ದಾರೆ. ಮೊಂಡುತನ ಯಾರಾದರೂ ಮಾಡಿದರೆ ಅವರಿಂದ ನೆತ್ತರು ಕಕ್ಕಿಸುತ್ತಾರೆ. ಅವರು ನಿನ್ನ ತಂದೇ ಮೇಲೆ ಮುಗಿಬೀಳುವರೆಂಬ ಭಯ ದಿಂದಲೇ ಬಾಕೀ ವಸೂಲಿಗೆ ನಾನು ಸ್ವಯಂ ಹೊರಟು ಬಂದೆ. ನನ್ನನ್ನು ಬರಿಗೈಯಿಂದ ಹಿಂದೆ ಕಳಿಸಿದಿಯಾದರೆ ನಿನ್ನ ಪ್ರಾಣಕ್ಕೆ ನಾನು ಜವಾಬ್ದಾರ ನಲ್ಲ. ನೀನು ಹಣ ಇಲ್ಲ ಅಂತ ನನ್ನನ್ನು ಮೋಸ ಪಡಿಸಬಹುದು. ಅದೆಲ್ಲಾ ಎಲ್ಲಿದೇ ಎಂಬುದು ಪಿಶಾಚಿಗೆ ಗೊತ್ತಿಲ್ಲದಿದ್ದೀತೆ? ಆ ಸಂಗತಿ ಪಿಶಾಚಿ ಗಳ ವಿಷಯ ತುಂಬಾ ಗೊತ್ತಿರುವಂತೆ ಮಾತಾಡುವ ನಿನಗೆ ಮಾತ್ರ ಗೊತ್ತಿಲ್ಲವೇ? ಇರಲಿ ಹೋಗಿ ಬರುತ್ತೇನೆ" ಎಂದು ಹೇಳಿ ಹೊರಟುಹೋದನು.

ಗೋವಿಂದಶೆಟ್ಟಿಗೆ ಮಂಕು ಬಡಿದಂತಾಯಿತು. ಪಿಶಾಚಿಯಾಗಿ ನಟಿಸುತ್ತ ಮನಷ್ಯರನ್ನು ಹೆದರಿಸ ಬಹುದಾಗಲಿ, ನಿಜವಾದ ಪಿಶಾಚಿ ಬೆನ್ನುಬಿದ್ದರೆ ಹೇಗೆ ತಡೆದುಕೊಳ್ಳಲಾದೀತು? ಅವನ ಮಾತು ನಿಜವಾದರೆ ತನ್ನ ಗತಿ ಏನಾಗುತ್ತದೋ ಎಂದು ಹೆದರಿದನು.



ಆದರೂ ತನ್ನ ಧನವನ್ನು ಕಾಪಾಡಬೇಕಲ್ಲ? ರಾತ್ರಿ ಎಂದಿನಂತೆ ಅವನು ಆಲದಮರದ ಕೆಳಗೆ ಹೋಗಿ ಪಿಶಾಚಿಯ ವೇಷ ಹಾಕಿಕೊಂಡನು. ಆದರೆ ಅವನ ಕಾಲುಗಳು ನಡುತ್ತಿದ್ದುವು.

ತನ್ನ ಹಣಕ್ಕಾಗಿ ಜೋಗೀಂದ್ರ ಪಿಶಾಚಿ ತನ್ನನ್ನು ಹುಡುಕಿಕೊಂಡು ಬರುತ್ತದೇನೋ? ಈ ನಿರ್ಜನ ಪ್ರದೇಶದಲ್ಲಿ ಪಿಶಾಚಿಯನ್ನು ಇದಿರುಗೊಳ್ಳುವುದಕ್ಕಿಂತಲೂ ತನ್ನ ಧನವನ್ನು ತನ್ನ ಮನೆಗೇ ಕೊಂಡೊಯ್ದು ಬಚ್ಚಿಡುವುದು ಮೇಲು. ಊರ ನಡುವೆ ಪಿಶಾಚಿಗಳ ಭಯ ಕಡಿಮೆ. ಕಳ್ಳರ ಭಯವೂ ಊರಿನಲ್ಲಿ ಕಡಿಮೆಯೇ. ಕೂಗಿದರೆ ಯಾರಾದರೂ ಓಡಿಬಂದಾರು. ಇಲ್ಲಿ ಯಾರಿದ್ದಾರೆ ಸಹಾಯಕ್ಕೆ? ಇಲ್ಲಿಗಿಂತ ಮನೆಯೇ ಲೇಸು.

ಹೀಗಂದುಕೊಂಡು ಗೋವಿಂದಶೆಟ್ಟಿ ತಾನು ಹುಗಿದಿಟ್ಟ ಜಾಗದಲ್ಲಿ ಅಗೆದು ಬಿಂದಿಗೆಗಳನ್ನು ಮೇಲಕ್ಕೆ ತೆಗೆದನು. ಅಷ್ಟರಲ್ಲಿ ಮರದ ಮೇಲಿನಿಂದ ಚಿನ್ನಪ್ಪನು ಗೋವಿಂದಶೆಟ್ಟಿಯ ಮುಂದೆ ಧುಡುಮ್ಮನೆ ಹಾರಿದನು. ಗೋವಿಂದಶೆಟ್ಟಿ ಹೆದರಿ ಕೆಟ್ಟ ದನಿಯಿಂದ ಕೂಗಿದನು. ಚಿನ್ನಪ್ಪನು ಅವನನ್ನು ಹಿಡಿದು ಆಲದಮರಕ್ಕೇ ಕಟ್ಟಿಹಾಕಿ, ಊರೊಳಗೆ ಹೋಗಿ, "ರಂಗಯ್ಯಶೆಟ್ಟಿಯ ಪಿಶಾಚಿಯನ್ನು ತೋರಿಸುತ್ತೇನೆ, ಬನ್ನಿ, ಬನ್ನಿ" ಎಂದು ಅನೇಕ ಜನರನ್ನು ಕರೆದುಕೊಂಡು ಬಂದನು. ಅವರು ಗೋವಿಂದಶೆಟ್ಟಿಯ ಗುರುತು ಹಿಡಿದು ಬೆರಗಾಗಿನಿಂತರು.

"ಸತ್ತುಹೋದ ರಂಗಯ್ಯಶೆಟ್ಟಿ ಅನೀತಿಯ ಮಾರ್ಗದಿಂದ ಇಷ್ಟು ಧನ ಸಂಪಾದನೆ ಮಾಡಿಕೊಂಡನೆಂದು ಊರೊಳಗೆ ಯಾರಿಗೂ ಗೊತ್ತಿರಲಿಕ್ಕಿಲ್ಲ. ಅದು ಊರವರಾರಿಗೂ ಗೊತ್ತಾಗಬಾರದೆಂದುಕೊಂಡು ಈ ಗೋವಿಂದಶೆಟ್ಟಿ ತನ್ನ ತಂದೆ ಸಂಪಾದಿಸಿದ್ದನ್ನೆಲ್ಲಾ ಬಿಂದಿಗೆಗಳಲ್ಲಿ ಹಾಕಿ ಇಲ್ಲಿ ಹುಗಿದಿಟ್ಟು, ತನ್ನ ತಂದೆ ಪಿಶಾಚಿಯಾದನೆಂದು ನಿಮ್ಮನ್ನೆಲ್ಲ ನಂಬಿಸಿ ರಾತ್ರಿಯಲ್ಲಿ ಈ ಧನನ್ನು ಕಾವಲು ಕಾದುಕೊಂಡಿರುತ್ತಾನೆ. ಇದರಲ್ಲಿ ಊರವರು ಅನ್ಯಾಯಕ್ಕೆ ಬಲಿಯಾಗಿ ಕಳೆದುಕೊಂಡ ಹಣ ಎಷ್ಟು ಏನು ಎಂಬುದನ್ನೆಲ್ಲ ನೀವೇ ನಿರ್ಣಯಿಸಿಕೊಳ್ಳಿರಿ. ನೀವು ದೆವ್ವಪಿಶಾಚಿಗಳಿಗೆ ಹೆದರಿಕೊಂಡಿದ್ದಷ್ಟು ಕಾಲವೂ ನಿಮ್ಮನ್ನು ಅದೇ ಭಯದಿಂದ ಯಾರಾದರೂ ಹೆದರಿಸಿಕೊಂಡು ತಮ್ಮ ಬೇಳೆ ಬೇಯಿಸಿಕೊಳ್ಳುತ್ತಾರೆ. ಇನ್ನಾದರೂ ಎಚ್ಚರಿಕೆಯಿಂದಿರಿ!" ಎಂದು ಬುದ್ಧಿ ಹೇಳಿದನು ಚಿನ್ನಪ್ಪ.

ಚಿನ್ನಪ್ಪನು ಗೋವಿಂದಶೆಟ್ಟಿಯನ್ನೂ, ಧನದ ಬಿಂದಿಗೆಗಳನೂ ಗ್ರಾಮಾಧಿಕಾರಿಯವಶಕ್ಕೆ ಒಪ್ಪಿಸಿಕೊಟ್ಟು, ತನ್ನ ನಾಯಿಯೊಂದಿಗೆ ಅಲ್ಲಿಂದ ಹೊರಟುಹೋದನು.





# ಪಟ್ಟಣಗಾಳಿ

ಒಂದು ಊರಿನಲ್ಲಿ ತಿಮ್ಮಯ್ಯ ಎಂಬವನಿಗೆ ಯಾವುದಕ್ಕೂ ಕಡಿಮೆಯಿದ್ದಿಲ್ಲ. ಅವನಿಗೆ ಒಳ್ಳೆಯ ಬೆಳೆ ಬರುವ ಹೊಲಗಳೂ, ಮಾವು ತೆಂಗು ಮೊದಲಾದ ತೋಟಗಳೂ ಇದ್ದುವು.

ಅವನು ತನ್ನ ಸೋದರಳಿಯನಾದ ಕೇಶವನನ್ನು ತನ್ನ ಮನೆಯಲ್ಲಿ ಪೋಷಿಸಿಕೊಂಡಿದ್ದನು. ಅವನು ಹತ್ತು ವಯಸ್ಸಿನ ಹುಡುಗನಾಗಿದ್ದಾಗಲೇ ತಂದೆ ತಾಯಿಯರನ್ನು ಕಳೆದುಕೊಂಡು ಅನಾಥನಾಗಿದ್ದನು. ಅಂತೆಯೇ ಅವನು ತಿಮ್ಮಯ್ಯನ ಆದರಣೆಯಲ್ಲೇ ಬೆಳೆದು ದೊಡ್ಡವನಾದನು. ತಿಮ್ಮಯ್ಯನು ವಾರಕ್ಕೆ ಒಂದು ದಿನ ತರಕಾರಿ, ಪಲ್ಲೆಸೊಪ್ಪು, ಹಣ್ಣು ಮುಂತಾದುವನ್ನು ಎತ್ತಿನ ಗಾಡಿಯಲ್ಲಿ ಹಾಕಿಕೊಂಡು ಸಂತೆಗೆ ಕೊಂಡೊಯ್ದು ಮಾರಿ ಬರುವನು. ಆಗ ತನ್ನ ಜತೆಯಲ್ಲಿ ಕೇಶವನನ್ನು ಕೂಡಾ ಕರೆದೊಯ್ಯುತ್ತಿದ್ದನು. ಗಾಡಿಯಲ್ಲಿದ್ದ ಕೇಶವನು ಯಾವ ಹಣ್ಣನ್ನೋ ಕಾಯಿಯನ್ನೋ ಬಾಯಿಗೆ ಹಾಕಿಕೊಂಡರೆ ತಿಮ್ಮಯ್ಯ ಏನೂ ಹೇಳುತ್ತಿದ್ದಿಲ್ಲ, ಬದಲಾಗಿ ಇನ್ನೂ ಎರಡು ತಿನ್ನು ಎನ್ನುತ್ತಿದ್ದನು. ಆದರೆ ಪಟ್ಟಣದ ಮೇರೆಯೊಳಗೆ ಹೊಕ್ಕ ಮೇಲೆ, ಮತ್ತು ಸಂತೆಯಲ್ಲಿ ತಿಮ್ಮಯ್ಯನ ಗುಣ ಬದಲಾಗಿ ಬಿಡುತ್ತಿತ್ತು. ಕೇಶವನು ಬಾಡಿದ ಮಿಡಿಯನ್ನು ಮುಟ್ಟಿದರೂ ತಿಮ್ಮಯ್ಯ ರೇಗಿ, "ಅದನ್ನು ಮಾರಿದರೆ ಮೂರು ಪೈಸೆಯಾದರೂ ಬರುತ್ತೆ. ತಿಂದು ಹಾಕಿದರೆ ಏನು ಬರುತ್ತೆ ?" ಎನ್ನುತ್ತಿದ್ದನು. ಆ ಮೇಲೆ ಹಿಂದಿರುಗುವಾಗ ಪಟ್ಟಣದ ಮೇರೆ ದಾಟಿದ ಕೂಡಲೇ ಮೊದಲಿನಂತಾಗುತ್ತಿದ್ದನು.

ಮುಂದೆ ಕೇಶವನು ದೊಡ್ಡವನಾದ ಮೇಲೆ ತಿಮ್ಮಯ್ಯ ತನ್ನ ಮಗಳು ಲಕ್ಷ್ಮಿಯನ್ನು ಅವನಿಗೆ ಕೊಟ್ಟು ಮದುವೆ ಮಾಡಿ, "ಎಲೋ ಕೇಶವಾ, ನಿನ್ನನ್ನು ಒಬ್ಬ ಗೃಹಸ್ಥನನ್ನಾಗಿ ಮಾಡಿದೆನಷ್ಟೆ? ಇನ್ನು ಮೇಲೆ ನೀನು ಹೀಗೇ ಇದ್ದರೆ ಸಾಗದು. ನಿನಗೆ ಮಕ್ಕಳು ಮರಿಗಳು ಹುಟ್ಟಿಕೊಂಡು ಬರುತ್ತಾರೆ. ಅವರಿಗಾಗಿಯಾದರೂ ನೀನು ತುಂಬಾ ಸಂಪಾದಿಸಬೇಕಲ್ಲವೆ ? ಹಳ್ಳಿಗಳಲ್ಲಿ ಏನಿರುತ್ತೆ ? ಪಟ್ಟಣದಲ್ಲಾದರೆ ಎರಡು ಕೈಯಿಂದ ಸಂಪಾದನೆ ಮಾಡಬಹುದು. ಪಟ್ಟಣದಕ್ಕೆ ಹೋಗಿ ಏನಾದರೂ ವ್ಯಾಪಾರ ಶುರುಮಾಡು !" ಎಂದನು. ಆದರೆ ಹಳ್ಳಿಯನ್ನು ಬಿಟ್ಟು ಹೋಗಲು ಕೇಶವನಿಗೆ

ಇಷ್ಟವಿರಲಿಲ್ಲ. ವ್ಯವಸಾಯ ಮಾಡಿಕೊಂಡು ಹಾಯಾಗಿರಬಹುದೆಂದು ಅವನ ಉದ್ದೇಶ. ಅಂತೆಯೇ ಅವನು ಮಾವನೊಂದಿಗೆ, "ನಾನು ಪಟ್ಟಣಕ್ಕೆ ಹೊರಟುಹೋದರೆ ಇಲ್ಲಿ ಹೊಲಗದ್ದೆ ತೋಟಗಳನ್ನು ಯಾರು ನೋಡಿಕೊಳ್ಳುತ್ತಾರೆ? ನಿಮಗೆ ವಯಸ್ಸಾಗಿ ಹೋಯಿತು. ನಿಮ್ಮಿಂದಾಗದು." ಎಂದನು.

ಆ ಮಾತನ್ನು ತಿಮ್ಮಯ್ಯ ಒಪ್ಪದೆ, "ನನಗೇನಾಗಿದೆ ಧಾಡಿ? ಕಬ್ಬಿಣದ ಪಿಂಡದ ಹಾಗಿದ್ದೇನೆ. ಇಲ್ಲಿಯ ಕೆಲಸಗಳನ್ನೆಲ್ಲಾ ನಾನೇ ನೋಡಿಕೊಳ್ಳುತ್ತೇನೆ. ನೀನು ಪಟ್ಟಣದಲ್ಲಿ ವ್ಯಾಪಾರ ಪ್ರಾರಂಭಿಸಲೇಬೇಕು" ಎಂದು ಹಟ ಹಿಡಿದನು.

ಕಡೆಗೆ ಕೇಶವನು ಸರಿಯೆಂದು, ಹೆಂಡತಿಯನ್ನು ಕರೆದುಕೊಂಡು ಪಟ್ಟಣಕ್ಕೆ ಹೋಗಿ ಅಲ್ಲಿ ಒಂದು "ಉಪಾಹಾರ ಭೋಜನಶಾಲೆ"ಯನ್ನು ಪ್ರಾರಂಭಿಸಿದನು. ಎರಡು ತಿಂಗಳು ಕಳೆಯುವುದರೊಳಗೆ ಎಲ್ಲಾ ಕೆಲಸಗಳನ್ನೂ ತಾನೇ ನೋಡುತ್ತ ಉಸಿರಾಡಲಿಕ್ಕೂ ಸಮಯವಿಲ್ಲದಂತೆ ತಿಮ್ಮಯ್ಯನಿದ್ದನು. ಅವನಿಗೆ ಮೈ ತುಂಬ ಕೆಲಸವಾಗಿ, ವಿಶ್ರಾಂತಿ ಇಲ್ಲದೆ ಹೋಯಿತು. ಒಂದು ದಿನ ತಿಮ್ಮಯ್ಯ ಸಮಯ ಮಾಡಿಕೊಂಡು ಪಟ್ಟಣಕ್ಕೆ ಹೊರಟನು. ಮೊದಲು ಅಳಿಯನ ವ್ಯಾಪಾರ ಹೇಗೆ ನಡೆಯುತ್ತದೆಂದು ನೋಡಿ, ಆ ಮೇಲೆ ಮಗಳ ಸಂಸಾರ ನೋಡೋಣವೆಂದುಕೊಂಡನು.

ತನ್ನ ಉಪಾಹಾರ ಶಾಲೆಗೆ ತಿಮ್ಮಯ್ಯ ಬರುವುದನ್ನು ದೂರದಿಂದಲೇ ನೋಡಿದ ಕೇಶವನು, ತಾನು ಕುಳಿತಲ್ಲಿಂದ ಎದ್ದು, ಒಬ್ಬ ಕೆಲಸದವನನ್ನು ಅಲ್ಲಿ ಕೂಡಿಸಿ, "ಈಗ ಬರುತ್ತೇನೆ. ಅಷ್ಟರವರೆಗೆ ವ್ಯಾಪಾರ ನೋಡಿಕೊಂಡಿರು. ಲೆಕ್ಕ ಸರಿಯಾಗಿ ವಸೂಲು ಮಾಡು." ಎಂದು ಎಚ್ಚರಿಕೆ ಹೇಳಿ ಎತ್ತಲೋ ಹೊರಟುಹೋದನು.

ತಿಮ್ಮಯ್ಯ ಉಪಾಹಾರ ಶಾಲೆಯೊಳಗೆ ಬಂದು, ಕೇಶವನು ಆಗ ತಾನೇ ಎಲ್ಲಿಗೋ ಹೋದನೆಂಬುದನ್ನು ತಿಳಿದು, ಮೇಜಿಯ ಮುಂದೆ ಕುಳಿತು ತನಗೆ ಬೇಕಾದ ತಿಂಡಿಯನ್ನು ತರಿಸಿ ತಿಂದು ಎದ್ದು



ಹೊರಡಲು ಉದ್ಯುಕ್ತನಾಗಿ, ಕೆಲಸದವನೊಂದಿಗೆ "ನಾನು ಅವನ ಮನೆಗೆ ಹೋಗಿದ್ದೇನೆಂದು ಕೇಶವನಿಗೆ ಹೇಳು" ಎಂದನು. "ಹಣ ಕೊಟ್ಟು ಹೋಗಿ ರಯ್ಯಾ" ಎಂದ ಕೆಲಸದವ.

"ಹಣ ಯಾಕೋ? ಇದು ನನ್ನ ಅಳಿಯನದೇ ಅಂಗಡಿಯಲ್ಲವೇನೋ?" ಎಂದ ತಿಮ್ಮಯ್ಯ.

"ಇಂಥವರನ್ನು ಬಹಳ ಮಂದೀನ ನೋಡಿದ್ದೇನೆ. ಮೊದಲು ಹಣಕೊಟ್ಟು ಮೆಟ್ಟಿಲಿಳಿಯಿರಿ." ಎಂದು ಕೆಲಸದವನು ತಿಮ್ಮಯ್ಯನ ಶಾಲನ್ನು ಹಿಡಿದು ಕೊಂಡನು.

"ಹಣ ತರಲಿಲ್ಲವಲ್ಲಾ!" ಎಂದು ತಿಮ್ಮಯ್ಯ ಎಂಜಲು ನುಂಗುತ್ತಾ ಅಂದನು.

ಎಲ್ಲಿಗೋ ಹೋದ ಕೇಶವನು ಹಿಂದಿರುಗಿ ಬಂದಾಗ ತಿಮ್ಮಯ್ಯನು ತಿರುಗಲ್ಲಿನ ಮುಂದೆ ಕುಳಿತು ಹಿಟ್ಟು ರುಬ್ಬುವುದನ್ನು ನೋಡಿದನು.

"ನೋಡಿದೆಯೇನೋ ಕೇಶವಾ! ನನಗೆ ಬಂದ ಪಾಡು?" ಎಂದು ನಡೆದ ಸಂಗತಿಯನ್ನೆಲ್ಲಾ ಅಳಿಯನೊಂದಿಗೆ ಹೇಳಿದನು ತಿಮ್ಮಯ್ಯ. "ಈ ಪಟ್ಟಣದ ಜನರೆಲ್ಲಾ ಇಷ್ಟೇ ಮಾವಯ್ಯಾ. ನಿಜ ಹೇಳಿದರೂ ನಂಬಲಾರರು." ಎಂದು ಕೇಶವನು ಅವನಿಗೆ ಸಮಾಧಾನ ಹೇಳಿದನು.

ಅಲ್ಲಿಂದ ತಿಮ್ಮಯ್ಯ ಮಗಳ ಮನೆಗೆ ಹೋದನು. ಆ ದಿನ ರಾತ್ರಿ ಲಕ್ಷ್ಮಿ ತನ್ನ ತಂದೆಗೂ, ಗಂಡನಿಗೂ ಬಡಿಸುವಾಗ, "ಆ ಕೆಲಸದವನನ್ನು ತೆಗೆದು ಹಾಕದೆ ಇನ್ನೂ ಇಟ್ಟುಕೊಂಡಿದ್ದೀರಾ?" ಎಂದು ಗಂಡನನ್ನು ಕೇಳಿದಳು.

"ಅವನೇನು ತಪ್ಪು ಮಾಡಿದ್ದಾನೆ? ತಿಳಿಯದ್ದರಿಂದ ಹಾಗಾಯಿತು. ನಾಳೆ ಮಾವ ಅಲ್ಲಿಗೆ ಬಂದು ಏನೇನು ಬೇಕೋ ಅದೆಲ್ಲಾ ತಿನ್ನಲಿ. ಮಾವಯ್ಯನಿಗಿಲ್ಲದ್ದು ಇನ್ನಾರು ತಿನ್ನಬೇಕು?" ಎಂದ ಕೇಶವ.

ಆ ಮಾತು ಕೇಳಿ ತಿಮ್ಮಯ್ಯನಿಗೆ ತೃಪ್ತಿಯಾಯಿತು. ಆದರೆ ಮರು ದಿನ ಉಪಾಹಾರ ಭೋಜನ ಶಾಲೆಗೆ ಹೋದ ತಿಮ್ಮಯ್ಯ, ಅಳಿಯ ಹೇಳಿದ ಮಾತು ಕೇಳಿ ಬೆರಗಾಗಿಬಿಟ್ಟನು.



"ಮಾವಯ್ಯಾ, ನಿಮಗೆ ಏನು ಬೇಕೋ ಅದೆಲ್ಲ ವನ್ನೂ ತಿನ್ನಿರಿ. ತಿಂದ ಮೇಲೆ ಮಾತ್ರ ಒಂದು ಕಾಸು ವ್ಯತ್ಯಾಸವಾಗದಂತೆ ಹಣ ಕೊಟ್ಟು ಹೋಗಬೇಕು. ಪ್ರತಿಯೊಂದೂ ಲೆಕ್ಕಕ್ಕೆ ಬರಲೇಬೇಕು. ಇಲ್ಲದಿದ್ದರೆ ವ್ಯಾಪಾರ ಸಾಗುವುದುಂಟೇ ?" ಎಂದ ಕೇಶವ.

ಆ ದಿನ ರಾತ್ರಿ ಕೇಶವನು ಮನೆಗೆ ಹೋದಾಗ ಲಕ್ಷ್ಮಿ ಅವನೊಂದಿಗೆ, "ಅಪೂರ್ವಕ್ಕೆ ಅಪ್ಪ ಬಂದಿದ್ದಾರೆ. ನೀವಂತೂ ಏನೂ ಮಾಡೋ ಹಾಗಿಲ್ಲ. ನಾನೇ ಸ್ವಲ್ಪ ವಿಶೇಷ ಅಡಿಗೆ ಮಾಡಿ ಅಪ್ಪನಿಗೆ ಸಣ್ಣ ಔತಣ ಹಾಕ್ತೀನೆ" ಎಂದಳು.

ಅದನ್ನು ಕೇಳಿ ಕೇಶವನು "ಏನಂದಿ? ಔತಣ ಮಾಡಿ ಹಾಕುವೆಯಾ? ಛೀ! ಛೀ! ಪಟ್ಟಣಕ್ಕೆ ಬಂದ ಮೇಲೆ ಮನೆ ಗುಂಡಾಂತರವಾಗುತ್ತೆ, ಗೊತ್ತಾ! ಇದೇನು ಛತ್ರವಾ? ಆದರೂ ಮಾವಯ್ಯನ ವಿಷಯ ಬೇರೇ ಅನ್ನು. ಸುಮ್ಮನೆ ಔತಣ ಮಾಡಿ ತಿನಿಸಿದರೆ ಏನು ಲಾಭ ಬರುತ್ತೆ? ಮಾರಿದರೆ ನಾಲ್ಕು ಕಾಸಾದರೂ ಬರುತ್ತೆ. ಪಟ್ಟಣಕ್ಕೆ ಬಂದದ್ದು ಹಣ ಮಾಡಲಿಕ್ಕೋ, ಇದ್ದದ್ದನ್ನು ಖರ್ಚು ಮಾಡಲಿಕ್ಕೋ? ಹೀಗೆಲ್ಲಾ ದಂಡ ಖರ್ಚು ಮಾಡುವುದು ಮಾವನಿಗೂ ಇಷ್ಟವಿಲ್ಲ ಗೊತ್ತಾ!" ಎಂದು ರೇಗಿಕೊಂಡನು.

ಊಟವಾದ ಮೇಲೆ ಅಂಗಳದಲ್ಲಿ ಮಂಚ ಹಾಕಿ ಮಲಗಿದಾಗ ತಿಮ್ಮಯ್ಯ ಅಳಿಯನನ್ನು ನೋಡಿ, "ಕೇಶವಾ, ನಿನ್ನ ಈ ಕರಾರುವಾಕ್ಕಾದ ರೀತಿನೀತಿ ನನಗೇನೂ ಹಿಡಿಸಲಿಲ್ಲಪ್ಪಾ" ಎಂದ.

"ಮತ್ತೇನು ಮಾಡಲಿ ಮಾವಯ್ಯಾ? ಈ ಪಟ್ಟಣದ ಗಾಳಿಯೇ ಅಂಥಾದ್ದು. ನಿಮಗೆ ಮಾತ್ರ ಗೊತ್ತಿಲ್ಲವೇನು? ಚಿಕ್ಕಂದಿನಲ್ಲಿ ನೀವೂ ಅಷ್ಟೇ ತಾನೇ? ನಾನು ಕೇಳಿದ್ದನ್ನು ಇಲ್ಲವೆನ್ನದೆ ಕೊಡುತ್ತಾ ಬೆಳೆಸಿದಿರಿ. ಆದರೆ ಸಂತೆಯಲ್ಲಿ ಬಾಡಿದ ಕಾಯಿಯನ್ನು ಕೂಡಾ ಮುಟ್ಟಲು ಬಿಡುತ್ತಿರಲಿಲ್ಲ. ನಾನು ಮೊದಲೇ ಹೇಳಿದ್ದೆ, ಪಟ್ಟಣವೇ ಬೇಡ, ಹಳ್ಳಿಯಲ್ಲೇ ಇರುತ್ತೇನೆ ಅಂತ. ನೀವು ಕೇಳಲಿಲ್ಲ." ಎಂದು ಹೇಳಿ ನಿಟ್ಟುಸಿರು ಬಿಟ್ಟ.

ತಿಮ್ಮಯ್ಯ ರಾತ್ರಿ ಪೂರಾ ಆಲೋಚನೆ ಮಾಡಿ, ಬೆಳಗಾದ ಮೇಲೆ ತನ್ನ ಹಳ್ಳಿಗೆ ಹೊರಡುತ್ತ, "ಕೇಶವಾ, ನಮಗೆ ಈ ವ್ಯಾಪಾರವೂ ಪಟ್ಟಣ ವಾಸವೂ ಬೇಡ ಬಿಡು. ನಿನ್ನ ವ್ಯಾಪಾರವನ್ನು ಯಾರಿಗಾದರೂ ಮಾರಿ, ಮನೆಗೆ ಬಂದು ಬಿಡಪ್ಪ. ಅದೇ ಒಳ್ಳೇದು" ಎಂದನು.

ಆ ಮಾತನ್ನು ವರಪ್ರಸಾದವೆಂದುಕೊಂಡು ಕೇಶವನು ಒಂದು ವಾರದೊಳಗೆ, ತನ್ನ ಉಪಾಹಾರ ಭೋಜನಶಾಲೆಯನ್ನು ಯಾರಿಗೋ ಮಾರಿ, ಹೆಂಡತಿಯನ್ನು ಕರೆದುಕೊಂಡು ಹಳ್ಳಿಗೇ ಹಿಂದಿರುಗಿ ಸೇರಿಕೊಂಡನು.



# ಭಿಕ್ಷುಕರು

ವಿಜಯಪುರದ ರಾಜನಾದ ಜಯದೇವನಿಗೆ ತನ್ನ ರಾಜ್ಯದಲ್ಲಿ ಭಿಕ್ಷುಕರು ಇಲ್ಲದಂತೆ ಮಾಡಬೇಕೆಂದು ತೋರಿತು. ಒಂದು ಸಮಯವನ್ನು ಗೊತ್ತು ಮಾಡಿ ಆ ಸಮಯಕ್ಕೆ ರಾಜ್ಯದಲ್ಲಿರುವ ಬಡವರೆಲ್ಲಾ ರಾಜಭವನದ ಮುಂದೆ ಬಂದು ನಿಂತರೆ, ಅವರಿಗೆಲ್ಲಾ ಮನೆಬಾಗಿಲು, ತಿಂಡಿಬಟ್ಟೆ ಮುಂತಾದ್ದು ಒದಗಿಸಿಕೊಡಲಾಗುವುದೆಂದು ಊರೊಳಗೆ ಡಂಗುರ ಸಾರಿದನು.

ಸಮಕ್ಕೆ ಸರಿಯಾಗಿ ಸಾವಿರಾರು ಮಂದಿ ಬಡವರು ಬಂದು ರಾಜಭವನದ ಮುಂದೆ ಹಾಜರಾದರು. ಅವರ ಸಂಖ್ಯೆ ನೋಡಿ ರಾಜನ ತಲೆ ತಿರುಗಿತು. ಅವರಿಗೆಲ್ಲ ಜೀವನೋಪಾಧಿ ಕಲ್ಪಿಸಲು ಖಜಾನೆಯಲ್ಲಿರುವ ಹಣವಂತೂ ಸಾಲದು. ರಾಜನು ಇಕ್ಕಟ್ಟಿಗೆ ಬಿದ್ದನು.

ಆಗ ಮಂತ್ರಿ ಬಂದು ಬಡಜನರೊಂದಿಗೆ "ಮನೆ ಬೇಕಾದವರೆಲ್ಲಾ ಗುಡ್ಡದ ಬದಿಗೆ ಹೋಗಿ ಕಲ್ಲು ಒಡೆಯಿರಿ. ಅವುಗಳಿಂದ ನೀವೇ ಮನೆ ಕಟ್ಟಿಕೊಳ್ಳುವಿರಿ." ಎಂದನು.

ಬಂದವರಲ್ಲಿ ಅಧಿಕ ಸಂಖ್ಯಾಕರು ಭಿಕ್ಷುಕರೇ ಹೊರತು ಶ್ರಮಿಸಿ ಕೆಲಸ ಮಾಡುವವರಲ್ಲ. ಎಲ್ಲರೂ ಹೊರಟು ಹೋದ ಮೇಲೆ ಕೆಲವು ಮಂದಿ ಮಾತ್ರ ಉಳಿದರು.

ರಾಜನು ಅವರಿಗೆ ತಾನು ಅಂದುಕೊಂಡ ಏರ್ಪಾಡುಗಳನ್ನು ಮಾಡಿಸಿಕೊಟ್ಟನು. ಆದರಿಂವ ಖಜಾನೆಯ ಶಕ್ತಿಗೆ ಯಾವ ಕುಂದೂ ಉಂಟಾಗದೆ, ರಾಜನ ಕೋರಿಕೆ ಈಡೇರಿತು.





# ಕೊಳ್ಳಿ ದೆವ್ವಗಳು

ಒಬ್ಬ ಮಂಡಲಾಧಿಕಾರಿ ತನ್ನ ಪರಿಪಾಲನೆಯಲ್ಲಿ ಪ್ರಜೆಗಳು ಹೇಗೆ ಜೀವನ ನಡೆಸುತ್ತಿದ್ದಾರೆಂಬುದನ್ನು ತನಿಖೆ ಮಾಡಲಿಕ್ಕಾಗಿ ಪರಿವಾರದೊಡನೆ ಹೊರಟನು.

ಒಂದು ಕಡೆಯಲ್ಲಿ ಅವರು ಪ್ರಯಾಣ ಮಾಡುತ್ತಿದ್ದಾಗ ನಡುದಾರಿಯಲ್ಲಿ ಕತ್ತಲಾಗಿಬಿಟ್ಟಿತು. ಸಮೀಪದಲ್ಲಿ ಯಾವ ಊರೂ ಕಾಣಲಿಲ್ಲ. ದೂರದಲ್ಲಿ ಮಿನುಕು ದೀಪಗಳು ಕಂಡುಬಂದುವು.

"ಆ ದೀಪಗಳು ಕಾಣುವ ಕಡೆಗೆ ಹೋಗೋಣ. ಅಲ್ಲಿ ಮನೆಗಳೋ ಮನುಷ್ಯರೋ ಇರಬಹುದು" ಎಂದು ಮಂಡಲಾಧಿಕಾರಿ ಹೇಳಿದನು.

"ಅಯ್ಯಾ, ಅವು ದೀಪಗಳಲ್ಲ. ಕೊಳ್ಳಿ ದೆವ್ವಗಳು. ಅಲ್ಲಿ ಸ್ಮಶಾನವೇನಾದರೂ ಇದ್ದೀತು" ಎಂದರು ಅಧಿಕಾರಿಯ ಆಳುಗಳು. "ಪರವಾಗಿಲ್ಲ, ನಡೆಯಿರಿ. ಸ್ಮಶಾನವಿದ್ದರೆ ಅದರ ಪಕ್ಕದಲ್ಲಿ ಊರೂ ಇದ್ದೇ ಇರುತ್ತೆ" ಎಂದ ಮಂಡಲಾಧಿಕಾರಿ.

ಅಂತೂ ಅವರೆಲ್ಲ ನಡೆಯುತ್ತ ಆ ಕಡೆಗೇ ಹೋದರು. ಸಮೀಪ ಹೋದಂತೆ ಅವು ಕೊಳ್ಳಿ ದೆವ್ವಗಳಲ್ಲವೆಂದೂ, ದೀಪಗಳೆಂದೂ ತಿಳಿಯಿತು. ಅದೊಂದು ಊರು. ಅಲ್ಲಿಗೆ ಹೋಗಿ ಮಂಡಲಾಧಿಕಾರಿಯ ಅಪ್ಪಣೆಯ ಮೇರೆಗೆ ಕೆಲವು ಮಂದಿ ಗ್ರಾಮಸ್ಥರು ಗ್ರಾಮಾಧಿಕಾರಿಯಾದ ಭೂಪಯ್ಯನನ್ನು ಮಂಡಲಾಧಿಕಾರಿಯ ಮುಂದೆ ಹಾಜರು ಪಡಿಸಿದರು. ಅವನು ಮಂಡಲಾಧಿಕಾರಿಗೆ ಬಿಲ್ಲಿನಂತೆ ಬಗ್ಗಿ ನಮಸ್ಕಾರ ಮಾಡುತ್ತ, ಆ ರಾತ್ರಿ ಅವರಿಗೆಲ್ಲ ವಸತಿ ಸೌಕರ್ಯಗಳನ್ನು ಏರ್ಪಡಿಸಿಕೊಟ್ಟನು.

ಬೆಳಗಾದ ಮೇಲೆ ಮಂಡಲಾಧಿಕಾರಿ ಗ್ರಾಮದ ತನಿಖೆಗೆ ಪ್ರಾರಂಭಿಸಿದನು. ಅಧಿಕಾರಿ ಗ್ರಾಮದ ಪರಿಸ್ಥಿತಿಯನ್ನು ನೋಡುವಾಗ ಭೂಪಯ್ಯ ಹೆದರಿ ನಡುಗಿಕೊಂಡಿದ್ದ. ಅದನ್ನು ಒಂದು ಊರು ಎನ್ನಲಿಕ್ಕೇ ನಾಚಿಕೆಯಾಗುವಂತಿತ್ತು. ಎಲ್ಲಿ ನೋಡಿದರೂ ಕಸಗುಪ್ಪೆಗಳು, ಗಲೀಜು ನೀರು, ಕೊಳಕಿನ ಹೊಂಡ.

"ಏನಯ್ಯಾ ಇದು ? ಗ್ರಾಮ ಇಷ್ಟೊಂದು ಹಾಳು ಬಡಿಯುತ್ತಿದ್ದರೆ ನೋಡಿಕೊಂಡು ಸುಮ್ಮನಿರುವಿರಲ್ಲಾ ? ತಕ್ಕ ಕ್ರಮ ಏಕೆ ತೆಗೆದುಕೊಳ್ಳಲಿಲ್ಲ ? ಮೇಲಿನ ಅಧಿಕಾರಿಗಳಿಗೆ ತಿಳಿಸದೆ ಸುಮ್ಮನಿದ್ದಿರೇಕೆ ? ಎಂಥ ಗ್ರಾಮಾಧಿಕಾರಿತನವಿದು !" ಎಂದು ಮಂಡಲಾಧಿಕಾರಿ ಗ್ರಾಮಾಧಿಕಾರಿಯ ಮೇಲೆ ರೇಗಿದ. "ಅಯ್ಯಾ, ನಾನು ಸುಮ್ಮನಿರಲಿಲ್ಲ. ಮೇಲಿನ

ಎಂ. ವಿ. ವಿ. ಸತ್ಯನಾರಾಯಣ

ವರಿಗೆ ಎಷ್ಟು ಅರ್ಜಿ ಬರೆದುಕೊಂಡರೂ ಫಲವಿಲ್ಲದೆ ಹೋಯಿತು. ಅವರಿಗಿಂತ ಮೇಲಿನವರ ಹತ್ರ ಹೇಳಿದರೆ ಲಂಚ ತಾ ಅನ್ನುತ್ತಾರೆ. ಬೆಳೆ ಎಲ್ಲಾ ಕೆಟ್ಟು ಹೋಗಿ ಜನರು ತಾಪತ್ರಯ ಪಡುತ್ತಿರುವಾಗ ಲಂಚದ ಹಣಕ್ಕೆ ನಾನೆಲ್ಲಿಗೆ ಹೋಗಲಿ?" ಎಂದು ಭೂಷಯ್ಯ ಕೈಕಾಲು ನಡುಗಿಸಿ ಕೊಳ್ಳುತ್ತ ಬಿನ್ನವಿಸಿಕೊಂಡ.

"ಹಾಗೇನು?" ಎಂದು ಮಂಡಲಾಧಿಕಾರಿ ಬೆಚ್ಚಿ ಬಿದ್ದು, ಆಗಿಂದಾಗಲೇ ತನ್ನ ಹತ್ತಿರವಿದ್ದ ಹಣವನ್ನೆಲ್ಲಾ ಸೇರಿಸಿ, ಹತ್ತು ಸಾವಿರ ರೂಪಾಯಿಗಳನ್ನು ಎಣಿಸಿ ಭೂಷಯ್ಯನಿಗೆ ಕೊಟ್ಟು, ಅವನೊಂದಿಗೂ, ಅವನಿಗೆ ಸಹಾಯಕರಾದ ಪಂಚಾಯಿತಿದಾರರೊಂದಿಗೂ— "ಇದರಿಂದ ಸಾಧ್ಯವಾದಷ್ಟು ಒಳ್ಳೆಯ ಕೆಲಸ ಮಾಡಿಸಿರಿ, ಎರಡು ತಿಂಗಳಲ್ಲಿ ನಾನು ಪುನಃ ಈ ಕಡೆಗೆ ಬರುತ್ತೇನೆ. ಗ್ರಾಮವು ಕನ್ನಡಿ ಹಾಗಿರಬೇಕು" ಎಂದು ಎಚ್ಚರಿಸಿದನು. ಆ ಮೇಲೆ ಮಂಡಲಾಧಿಕಾರಿ ತನ್ನ ಪರಿವಾರದೊಂದಿಗೆ ಮುಂದೆ ಸಾಗಿ ಹೋದನು.

ಭೂಷಯ್ಯನೇನೋ ಆ ಹಣದಿಂದ ಗ್ರಾಮವನ್ನು ಚೊಕ್ಕಮಾಡಬೇಕೆಂದೇ ಎಣಿಸಿದ್ದನು. ಆದರೆ ಮಾರು ದಿನವೇ ಹಬ್ಬವಾಗಿತ್ತು. ಅವನ ಮಗಳೂ ಅಳಿಯನೂ ಬಂದುಬಿಟ್ಟರು. ಅವರೊಂದಿಗೂ ಮಕ್ಕಳೊಂದಿಗೂ ಹಬ್ಬದ ಗದ್ದಲದಲ್ಲಿ ನಾಲ್ಕುದಿನ ಸಂತೋಷವಾಗಿ ಕಳೆದುಹೋಯಿತು. ಆ ಸಂತೋಷದಲ್ಲಿ ಭೂಷಯ್ಯ ತನ್ನ ಹತ್ತಿರವಿದ್ದ ಹಣದಲ್ಲಿ ಸಾವಿರ ರೂಪಾಯಿ ಖರ್ಚು ಮಾಡಿ ಮಗಳಿಗೊಂದು ಬಂಗಾರದ ಗೊಲುಸು ಮಾಡಿಸಿ, ಎಲ್ಲರಿಗೂ ಹೊಸ ಬಟ್ಟೆಗಳನ್ನು ಕೊಂಡುಕೊಂಡನು.

ಅದರೆಡೆಯಲ್ಲಿ ಭೂಷಯ್ಯನ ಹೆಂಡತಿ ತನಗೆ ಬಂಗಾರದ ಒಡ್ಯಾಣಬೇಕೆಂದು ಪಟ್ಟುತೊಟ್ಟಳು. ಆಗಿಹೋದ ಖರ್ಚಿಗೇ ಸಂಕಟಪಡುತ್ತಿದ್ದ ಭೂಷಯ್ಯ ಹೆಂಡತಿಯೊಡನೆ ಎಷ್ಟೋ ಅಂಗಲಾಚಿದ. ಪ್ರಜೆಗಳ ಹಣ ತನ್ನ ಇಷ್ಟಪ್ರಕಾರ ಖರ್ಚು ಮಾಡುವ ಹಕ್ಕು ತನಗಿಲ್ಲವೆಂದು ತಿಳಿ ಹೇಳಿ ನೋಡಿದ. ಅವಳು ಗಂಡನ ಮಾತನ್ನು ಲಕ್ಷ್ಯಮಾಡದೆ, ಚಿನಿವಾರನ ಹತ್ತಿರ ಸಾಲದ ಲೆಕ್ಕದಲ್ಲಿ ಒಡ್ಯಾಣ ಮಾಡಿಸಿಯೇ ಬಿಟ್ಟಳು. ಉಪಾಯವಿಲ್ಲದೆ ಭೂಷಯ್ಯ ಪ್ರಜೆಗಳ ಹಣದಿಂದಲೇ ಆ ಸಾಲ ತೀರಿಸಬೇಕಾಯಿತು.



ಈ ಸಂಗತಿ ಪಂಚಾಯಿತೀದಾರರಿಗೂ ಗೊತ್ತಾಯಿತು. ಅವರು ಬಂದು ತಮ್ಮ ಹಾಲಹವಾಲೆ ಹೇಳಿಕೊಂಡು ಮತ್ತೊಂದು ಸಾವಿರ ಸಾಲ ಕೇಳಿದರು. ಭೂಷಯ್ಯ ಅವರು ಕೇಳಿದಂತೆ ಕೊಡಲೂ ಬೇಕಾಯಿತು.

ಆಮೇಲೆ ಪಂಚಾಯಿತೀ ಉದ್ಯೋಗಸ್ಥರು ಎಷ್ಟು ಕಡಿಮೆಯಲ್ಲಿ ಊರುದುರಸ್ತಿ ಮಾಡಲು ಸಾಧ್ಯವೆಂದು ಲೆಕ್ಕಹಾಕಿದರು. ಎಷ್ಟು ಹೀನವಾಗಿ ನೋಡಿದರೂ ಹತ್ತು ಸಾವಿರಕ್ಕಿಂತ ಕಡಮೆಗೆ ಏನೂ ಮಾಡುವಂತಿಲ್ಲವೆಂದು ಗೊತ್ತಾಯಿತು. ಭೂಷ

ಯ್ಯನ ಹತ್ತಿರ ಉಳಿದಿರುವುದು ಐದು ಸಾವಿರ ಮಾತ್ರವೇ ! ಅವನು ಇಕ್ಕಟ್ಟಿನಲ್ಲಿ ಸಿಕ್ಕಿಬಿದ್ದನು.

ಇದು ಸಾಲದ್ದಕ್ಕೆ ಭೂಪಯ್ಯನ ಹೆಂಡತಿ ಒಬ್ಬ ಕೆಲಸದಾಳನ್ನು ಇಟ್ಟುಕೊಂಡಳು. ಒಂದು ದಿನ ಆ ಹೊಸ ಜೀತದಾಳು ಭೂಪಯ್ಯನ ಮಂಚದಡಿ ಯಲ್ಲಿದ್ದ ಹಣದ ಚೀಲವನ್ನು ನೋಡಿ, ಅದನ್ನು ಹಾರಿಸಿಕೊಂಡು ಓಡಿಹೋಗಿಬಿಟ್ಟನು. ಈ ಸಮಾ ಚಾರ ನಿಮಿಷ ಮಾತ್ರದಲ್ಲಿ ಆ ಮಂಡಲದೊಳಗೆಲ್ಲಾ ಹರಡಿಹೋಯಿತು. ಭೂಪಯ್ಯನ ಮನೆಯ ಜೀತ ದಾಳು ಹತ್ತು ಸಾವಿರ ರೂಪಾಯಿಯನ್ನೂ ಅಪ ಹರಿಸಿ ಓಡಿಹೋದನೆಂದು ಎಲ್ಲರೂ ಹೇಳಿಕೊಳ್ಳ ತೊಡಗಿದರು. ಮಂಡಲಾಧಿಕಾರಿಗೂ ಈ ವಾರ್ತೆ ತಿಳಿದುದರಿಂದ ಮರುದಿವಸವೇ ಭೂಪಯ್ಯನನ್ನು ತನ್ನ ಬಳಿಗೆ ಕರೆಯಿಸಿ "ಉಳಿದ ಐದು ಸಾವಿರ ರೂಪಾಯಿ ಏನಾಯಿತು ?" ಎಂದು ಕೇಳಿದನು.

ಭೂಪಯ್ಯ ಆ ಪ್ರಶ್ನೆಯಿಂದ ಗಲಿಬಿಲಿಗೊಂಡವ ನಾಗಿ, ಇದ್ದ ಹತ್ತು ಸಾವಿರವನ್ನೂ ಜೀತದಾಳು ಎತ್ತಿ ಕೊಂಡು ಹೋದನೆಂದು ಹೇಳಿದನು. ಹೀಗೆ ಅವನು ಹೇಳಿ ಮುಗಿಸುವಷ್ಟರಲ್ಲಿ, ಮಂಡಲಾಧಿಕಾರಿಯ ಮನೆಯೊಳಗಿನಿಂದ ಭೂಪಯ್ಯನ ಜೀತದಾಳು ಹೊರಗೆ ಬಂದನು. ಅವನನ್ನು ನೋಡಿ ಭೂಪಯ್ಯ ಕಣ್ಣು ತಿರುಗಿಸುತ್ತ, "ಏನೋ ಕಳ್ಳಾ ! ಹತ್ತು ಸಾವಿರದ ಗಂಟನ್ನೆ ಎತ್ತಿಕೊಂಡು ಹೋಗಿ ಇವರ ಹತ್ರ ಸೇರಿಕೊಂಡೆಯಾ ?" ಎಂದನು.

ಮಂಡಲಾಧಿಕಾರಿ ಭೂಪಯ್ಯನ ಮುಖಕ್ಕೆ ಮಂಗ ಳಾರತಿ ಮಾಡುತ್ತ–"ಭೂಪಯ್ಯ ! ನೀವೇ ಆ ಹಣ ಅವನ ಕಣ್ಣಿಗೆ ಬೀಳುವ ಹಾಗೆ ಬೇಕಂತ ಇಟ್ಟಿದ್ದೀರಿ. ಮೊತ್ತ ಕಳ್ಳತನ ಅವನ ಮೇಲೆ ಹಾಕುವುದೇ ನಿಮ್ಮ ಉದ್ದೇಶ. ಪಾಪ, ಅವನು ನನ್ನ ಮಗನೇ ಎಂಬುದು ನಿಮಗೆ ಗೊತ್ತಿಲ್ಲ. ನೀವು ಹಣವನ್ನು ಒಳ್ಳೆಯ ರೀತಿಯಲ್ಲಿ ವಿನಿಯೋಗಿಸುವಿರೋ ಇಲ್ಲವೋ ಎಂದು ನೋಡಲು ನಿಮ್ಮ ಮೇಲೆ ಕಣ್ಣಿಡುವಂತೆ ಅವನನ್ನು ಕಳಿಸಿದ್ದೆ. ನೀವು ಅಂದುಕೊಂಡ ಹಾಗೆ ಕಳ್ಳತನ ವೇನೋ ನಡೆಯಿತು. ಆದರಿಂದ ನಿಮ್ಮ ರಹಸ್ಯ ವೆಲ್ಲಾ ಬಯಲಾಯ್ತು. ಹೇಗಾದರೂ ಸರಿ, ನೀವು ಖರ್ಚು ಮಾಡಿದ ಹಣ ಭರ್ತಿಮಾಡಿ ಕೊಡ ತಕ್ಕದ್ದು. ಗ್ರಾಮಾಭಿವೃದ್ಧಿಯ ಕಾರ್ಯ ನನ್ನ ಮಗನೇ ನೋಡಿಕೊಳ್ಳುತ್ತಾನೆ" ಎಂದನು.

ಭೂಪಯ್ಯನಿಗೆ ತಲೆಯೆತ್ತಲಾಗದೆ, ತನ್ನ ಮನೆ ಯನ್ನು ಅಡವು ಹಾಕಿ ಹಣ ತುಂಬಿಕೊಟ್ಟನು. ಮಂಡಲಾಧಿಕಾರಿ ತನ್ನ ಪರಿವಾರದೊಂದಿಗೆ, "ನೀವು ಆ ದಿನ ಹೇಳಿದಿರಲ್ಲಾ ಕೊಳ್ಳಿದೆವ್ವಗಳೆಂದು? ಪ್ರಜೆ ಗಳ ಹಣವನ್ನು ಸ್ವಂತ ಹಣದಂತೆ ಖರ್ಚು ಮಾಡುವ ವರೇ ನಿಜವಾದ ಕೊಳ್ಳಿದೆವ್ವಗಳು !" ಎಂದನು.





# ರಾಜನತಪ್ಪ

ಒಂದಾನೊಂದು ದೇಶದಲ್ಲಿ ರಾಜಸೇನನೆಂಬ ಒಬ್ಬ ರಾಜನಿದ್ದ. ಅವನಿಗೆ ಒಬ್ಬಳು ಮಗಳಿದ್ದಳು. ಅವಳು ಕಪ್ಪು ಬಣ್ಣದಿಂದ ತುಂಬಾ ವಿಕಾರರೂಪದವಳು. ಆದುದರಿಂದ ಅವಳಿಗೆ ವಿವಾಹದ ವಯಸ್ಸು ಬಂದು, ಆದರ ಮೇಲೆ ವರ್ಷಗಳುರುಳುತ್ತಿದ್ದರೂ ಅವಳಿಗೆ ವಿವಾಹವಾಗದೆ ರಾಜನಿಗೆ ಚಿಂತೆ ಹಿಡಿಯಿತು. ಬರುಬರುತ್ತ ತನ್ನ ಮಗಳಿಗೆ ಮದುವೆ ಹೇಗೆ ಮಾಡುವುದೆಂದು ರಾಜನು ಹಗಲಿರುಳೂ ಒಂದೇಸವನೆ ದುಃಖಿಸತೊಡಗಿದನು.

ಕಟ್ಟಕಡೆಗೆ ಒಂದು ದಿನ ರಾಜನು ಏನೋ ಒಂದು ನಿಶ್ಚಯಕ್ಕೆ ಬಂದು ತನ್ನ ಮಂತ್ರಿಯಾದ ರಾಹುಲನನ್ನು ಕರೆದು, "ನೋಡಯ್ಯಾ ಮಂತ್ರೀ, ಇನ್ನು ಒಂದು ವಾರದೊಳಗೆ ನನ್ನ ಮಗಳಿಗೆ ವರನನ್ನು ತಂದು ನಿಶ್ಚಯಮಾಡಿ ಬಿಡಬೇಕು. ಈ ಕೆಲಸ ನೀನೇ ಮಾಡಬೇಕು. ಒಂದು ವಾರದೊಳಗೆ ಗುಣವಂತನಾದ ಒಬ್ಬ ಯುವಕನನ್ನು ನನ್ನ ಅಳಿಯನಾಗಲು ಒಪ್ಪಿಸಿ ಕರೆದುಕೊಂಡು ಬಾರದೆ ಹೋದರೆ, ತುಂಬಿದ ಸಭೆಯಲ್ಲಿ ನಿನ್ನ ತಲೆ ಕಡಿಸುತ್ತೇನೆ, ಹೋಗು" ಎಂದು ಕಟ್ಟಾಣತಿ ಕೊಟ್ಟು ಕಳುಹಿಸಿದನು.

ಮಂತ್ರಿ ರಾಹುಲನು ರಾಜನ ಅಳಿಯನಿಗಾಗಿ ಹಗಲೂ ರಾತ್ರಿ ಅನ್ವೇಷಣೆ ಮಾಡಿದನು. ಏನೂ ಲಾಭವಾಗಲಿಲ್ಲ. ರಾಜನ ಮಗಳು ಪರಮಕುರೂಪಿ ಎಂದು ಎಲ್ಲರಿಗೂ ಗೊತ್ತಿತ್ತು. ಆದುದರಿಂದ ಯಾರೂ ಅವಳನ್ನು ಮದುವೆಯಾಗಲು ಒಪ್ಪಲಿಲ್ಲ. ಮಂತ್ರಿ ತನಗಿರುವ ಸ್ವಲ್ಪಮಾತ್ರ ಕಾಲಾವಧಿಯಲ್ಲಿ ಬಹಳ ಶ್ರಮಪಟ್ಟು ದೂರದೂರದ ಪ್ರದೇಶಗಳಿಗೆಲ್ಲ ಹೋಗಿ ಹುಡುಕಾಡಿ ಬಂದನು. ಬಳಲಿಬೆಂಡಾಗಿ ಹೋದನೇ ಹೊರತು ಏನೂ ಪ್ರಯೋಜನವಾಗಲಿಲ್ಲ. ಬದುಕುವ ಆಶೆಬಿಟ್ಟನು.

ಆರು ದಿನಗಳು ಕಳೆದುಹೋದುವು. ತನ್ನ ಗಂಡನ ಮುಖದಲ್ಲಿರುವ ಚಿಂತೆಯ ಗೆರೆಗಳನ್ನು ನೋಡಿ ಅವನ ಹೆಂಡತಿ ಕಾರಣ ಕೇಳಿದಳು. ರಾಹುಲನು ಅವಳ ಒತ್ತಾಯಕ್ಕೊಳಗಾಗಿ ಕಡೆಗೆ ನಿಜ ಸಂಗತಿಯನ್ನು ಹೆಂಡತಿಯೊಡನೆ ಹೇಳಿದನು. "ಅಂತೂ ರಾಜನ ಅಪ್ಪಣೆಯನ್ನು ನೆರವೇರಿಸಲು ನಾನು ಅಸಮರ್ಥನಾದೆ. ನಾಳೆ ತುಂಬಿದ ಸಭೆಯಲ್ಲಿ ನನ್ನ ತಲೆಯನ್ನೇ ಬಲಿ ಕೊಡಬೇಕಾಗಿ ಬಂದಿದೆ" ಎಂದು ದುಃಖದಿಂದ ಹೇಳಿದನು.

ಎನ್. ಅಕ್ಬರ್

ಅದನ್ನೆಲ್ಲ ಕೇಳಿ ರಾಹುಲನ ಹೆಂಡತಿ, "ಹಾಗೇನೂ ಆಗದು. ನೀವೇನೂ ಹೆದರಬೇಡಿ. ಇದಕ್ಕೇನಾದರೂ ಉಪಾಯ ಆಲೋಚಿಸೋಣ" ಎಂದು ಸಮಾಧಾನ ಹೇಳಿದಳು. ಹೆಂಡತಿಯ ಮಾತಿನಿಂದ ರಾಹುಲನಿಗೆ ಧೈರ್ಯ ಬಂದು ಆ ರಾತ್ರಿ ನಿಶ್ಚಿಂತೆಯಿಂದ ಊಟ ಮಾಡಿ ಹೆಂಡತಿಯೊಡನೆ ಏನು ಉಪಾಯವೆಂದು ಕೇಳಿದನು. ಅವಳು ಯಾವ ಉಪಾಯವನ್ನೂ ಹೇಳದೆ ಧೈರ್ಯಮಾತ್ರ ಹೇಳಿದಳು.

ಮರುದಿನ ರಾಜಭಟರು ಬಂದು, ರಾಜನು ಕರೆದು ಕೊಂಡು ಬರಲು ಹೇಳಿದನೆಂದಾಗ, "ನೀವು ಧೈರ್ಯದಿಂದ ಹೋಗಿ" ಎಂದಳು ಹೆಂಡತಿ. ರಾಹುಲನು ಭಟರೊಂದಿಗೆ ಹೊರಟನು. ರಾಜನು ತುಂಬಿದ ಸಭೆಯಲ್ಲಿ ಮಂತ್ರಿಯನ್ನು ನೋಡಿ, "ನನ್ನ ಕುಮಾರಿಗೆ ಸಂಬಂಧ ನೋಡಿದೆಯಾ?" ಎಂದು ಕೇಳಿದನು. "ಇಲ್ಲ" ಎಂದ ಮಂತ್ರಿ.

ಮಂತ್ರಿಯ ಮಾತಿನಿಂದ ಕೋಪೋದ್ರಿಕ್ತನಾದ ರಾಜನು ಮಂತ್ರಿಯ ತಲೆ ಕಡಿಯಲು ಕಟುಕರನ್ನು ಕರೆಯುವಂತೆ ಆಜ್ಞೆಮಾಡಿದನು.

ಅದೇ ಸಮಯದಲ್ಲಿ ಮಂತ್ರಿ ರಾಹುಲನ ಹೆಂಡತಿ ಹರಕುಬಟ್ಟೆಗಳನ್ನು ಧರಿಸಿ ಒಂದು ಹಸುಕಂದನನ್ನು ಕೈಯಲ್ಲಿಟ್ಟುಕೊಂಡು ಸಭೆಯೊಳಗೆ ಬಂದಳು. ಅವಳು ಮಂತ್ರಿ ರಾಹುಲನ ಹೆಂಡತಿ ಎಂಬುದು ರಾಜನಿಗೆ ತಿಳಿಯದು. ರಾಜನು ಅವಳನ್ನು ನೋಡಿ ಆಶ್ಚರ್ಯ ಪಡುತ್ತ, "ಏನು? ಯಾರು ನೀನು? ನಿನಗೇನು ಬೇಕು?" ಎಂದು ಕೇಳಿದನು.

"ಮಹಾಪ್ರಭುಗಳೇ, ನನ್ನನ್ನು ರಕ್ಷಿಸಿರಿ. ನನ್ನ ಮಗು ಯಾವಾಗಲೂ ಅಳುತ್ತಾ ಇರುತ್ತೇ ಅಂತ ನನ್ನ ಗಂಡ ನನ್ನನ್ನು ಹೊಡೆಯುತ್ತಾನೆ. ಹೊಡೆದು ಕೊಲ್ಲುತ್ತೇನೆನ್ನುತ್ತಾನೆ! ನೀವೇ ಕಾಪಾಡಬೇಕು" ಎಂದಳು ರಾಹುಲನ ಹೆಂಡತಿ.

"ಮಗುವಿಗೇನಾದರೂ ರೋಗವಿದೆಯೋ ಏನೋ? ಅದು ಅತ್ತರೆ ನೀನು ಹೇಗೆ ಬಾಧ್ಯಳಾಗುವಿ? ಆ ಮೂರ್ಖನನ್ನು ಶಿಕ್ಷಿಸುತ್ತೇನೆ. ನನ್ನ ಇದಿರಿಗೆ ಕರೆಕೊಂಡು ಬಾ ಅವನನ್ನು!" ಎಂದ ರಾಜ ಉದ್ರೇಕದಿಂದ.

ಕೂಡಲೇ ಅವಳು "ಮಹಾಪ್ರಭುಗಳೇ! ನಿಮ್ಮ ಮಗಳಿಗೆ ಮದುವೇ ಸಂಬಂಧ ಬಾರದೇ ಹೋಗಲಿಕ್ಕೆ ಅವಳಲ್ಲಿ ಏನು ಲೋಪವಿದೆಯೋ ಏನೋ? ಅದಕ್ಕಾಗಿ ಮಂತ್ರಿಯನ್ನು ಶಿಕ್ಷಿಸುವಿರೇಕೆ? ನಾನು ನಿಮ್ಮ ಮಂತ್ರಿಯ ಹೆಂಡತಿ. ದಯಮಾಡಿ ನನ್ನ ಗಂಡನನ್ನು ಬಿಟ್ಟುಬಿಡಬೇಕು" ಎಂದಳು.

ಅವಳ ಮಾತು ಕೇಳಿ ಸಭೆಯಲ್ಲಿದ್ದವರೆಲ್ಲ ಹರ್ಷ ಧ್ವನಿ ಮಾಡಿದರು. ರಾಜನು ತನ್ನ ತಪ್ಪು ತಿಳಿದು, ಮಂತ್ರಿಯನ್ನು ಬಿಟ್ಟು, ಕ್ಷಮೆ ಕೇಳಿದನು.



# ಶಾಮಯ್ಯನ ಸ್ವರ್ಗ

**ಶಾ**ಮಯ್ಯನೆಂಬ ಧನಿಕನು ಅವನ ಜನ್ಮದಲ್ಲಿ ದಾನಧರ್ಮ ಮಾಡಿದವನಲ್ಲ. ಹಾಗೆಂದರೇನೆಂದೇ ಅವನಿಗೆ ತಿಳಿಯದು. ಕಟ್ಟಕಡೆಗೆ ಯಮದೂತ ಅವನ ಬಳಿಗೆ ಬಂದಾಗ, ಅವನಿಗೆ ಒಂದು ಆಲೋಚನೆ ಹೊಳೆಯಿತು. ಅವನು ಯಮದೂತನೊಂದಿಗೆ, "ಸ್ವಲ್ಪ ತಡೆ. ನನ್ನ ಆಸ್ತಿಯಲ್ಲಿ ಅರ್ಧಭಾಗ ಮಕ್ಕಳಿಗೆ ಬಿಟ್ಟು ಉಳಿದುವುಗಳನ್ನು ದಾನಧರ್ಮಗಳಿಗೆ ಬರೆದಿಡಬೇಕೆಂದು ಮಾಡಿದ್ದೇನೆ. ಅರ್ಧ ಗಂಟೆಯಲ್ಲಿ ಅಷ್ಟು ಮಾಡಿ ಬರುತ್ತೇನೆ"ವೆಂದು ಕೇಳಿಕೊಂಡನು.

"ನನಗೆ ಆ ಅಧಿಕಾರ ಇಲ್ಲ. ಯಮಧರ್ಮರಾಜನನ್ನು ಕೇಳು" ಎಂದ ಯಮದೂತ. ಶಾಮಯ್ಯ ತನ್ನ ಮಗಂದಿರೊಂದಿಗೆ ತಾನು ಮತ್ತೆ ಬದುಕಿ ಬಂದು ವೀಲುನಾಮೆ ಬರೆಯುವೆನೆಂದೂ, ಅದುವರೆಗೆ ದಹನಕಾರ್ಯ ಮಾಡಬೇಡಿರೆಂದೂ ಹೇಳಿದನು.

ಅಮೇಲೆ ಅವನು ಸತ್ತು ಯಮಧರ್ಮರಾಜನ ಬಳಿಗೆ ಹೋಗಿ ಕೆಲವು ನಿಮಿಷಗಳ ಗಡು ಕೇಳಿದನು. ಯಮನೂ ಒಪಿಗೆಕೊಟ್ಟನು.

ಅಷ್ಟರೊಳಗೆ ಶಾಮಯ್ಯನ ಮಗಂದಿರು, ತಂದೆ ಬದುಕಿ ಬಂದರೆ ವೀಲುನಾಮೆಯಿಂದ ಇದ್ದ ಆಸ್ತಿ ಹಂಚಿ ಹೋಗುತ್ತದೆಂದುಕೊಂಡು. ಬೇಗ ಬೇಗನೇ ದಹನದ ಏರ್ಪಾಡು ಮಾಡಿದರು. ಚಿತೆಯ ಮೇಲೆ ಬದುಕಿ ಎದ್ದ ಶಾಮಯ್ಯ, ಮಗಂದಿರ ಮೇಲೆ ಕೋಪಗೊಂಡು, ತನ್ನ ಆಸ್ತಿಯನ್ನೆಲ್ಲಾ ಧಾನಧರ್ಮಗಳಿಗೆ ಬರೆದಿಟ್ಟು ಸತ್ತು ಸ್ವರ್ಗ ಸೇರಿದ.





# ವೆಂಕಮ್ಮನ ಗಂಡ

ಒಂದು ಊರಿನಲ್ಲಿ ವೆಂಕಮ್ಮನೆಂಬವಳು ಬಹಳ ಪ್ರಸಿದ್ಧಳಾಗಿದ್ದಳು. ಅವಳ ಗಂಡ ಬಂಗಾರಪ್ಪ ತುಂಬ ಉದಾಸೀನದ ಮನುಷ್ಯ. ಮದುವೆಯಾದ ಮೇಲೆ ಅವನು ಸ್ವಂತ ಊರುಬಿಟ್ಟು ಹೆಂಡತಿಯ ಮನೆಯಲ್ಲೇ ಇರತೊಡಗಿದ್ದನು. ಕೆಲಸಬೊಗಸೆ ಏನಿಲ್ಲದ ಅವನನ್ನು ವೆಂಕಮ್ಮನೊಬ್ಬಳೇ ದುಡಿದು ಪೋಷಿಸಿಕೊಂಡಿದ್ದಳು.

ವೆಂಕಮ್ಮ ಬಲುಚುರುಕು. ಅವಳು ಮಾಡದ ಕೆಲಸ ಅಂತ ಯಾವುದೂ ಇಲ್ಲ. ಹಾಲು ಕರೆದು ಮಾರುವಳು, ಬೆರಣಿ ತಟ್ಟುವಳು. ನಾಲ್ಕಾರು ಮನೆಗಳಿಗೆ ಹೋಗಿ ಅಡಿಗೆ ಚಾಕರಿ ಮಾಡುವಳು. ಯಾರ ಮನೆಯಲ್ಲಿ ಏನು ವಿಶೇಷ ನಡೆದರೂ ಹೋಗಿ ನಡುಬಗಿದು ಕೆಲಸ ಮಾಡುವಳು. ಊರಲ್ಲಿರುವ ಎಲ್ಲರಿಗೂ ಅವಳು 'ನಮ್ಮ ವೆಂಕಮ್ಮ'ನೇ ಆಗಿಬಿಟ್ಟಿದ್ದಳು.

ಒಂದು ದಿನ ಮಧ್ಯಾಹ್ನ ಬಂಗಾರಪ್ಪ ನಿದ್ದೆ ಮಂಪರಿನಲ್ಲಿರುವಾಗ, ಯಾರೋ ನೆರೆಮನೆಯ ಹೆಂಗುಸಿನ ಹತ್ತಿರ "ಇಲ್ಲಿ ಬಂಗಾರಪ್ಪನ ಮನೆ ಎಲ್ಲಿ?" ಎಂದು ಕೇಳುವುದೂ "ಇಲ್ಲಿ ಎಲ್ಲಿಯೂ ಬಂಗಾರಪ್ಪಾ ಅಂತ ಯಾರೂ ಇಲ್ಲವಲ್ಲಾ" ಎಂದು ಪ್ರತ್ಯುತ್ತರ ಕೊಡುವುದೂ ಅವನ ಕಿವಿಗೆ ಬಿತ್ತು.

ಬಂಗಾರಪ್ಪ ಎದ್ದು ಹೋಗಿ ಬಾಗಿಲು ತೆರೆದು ನೋಡಿದನು. ಅಲ್ಲಿ ಬಂಗಾರಪ್ಪನ ಊರಿನ ಹಳೆಯ ಪರಿಚಿತನೊಬ್ಬ ನಿಂತು ವಿಚಾರಿಸುತ್ತಿದ್ದನು. ಅವನು ಬಂಗಾರಪ್ಪನನ್ನು ನೋಡಿ, "ಅದೋ ಬಂಗಾರಪ್ಪ! ಇಲ್ಲಿ ಯಾರೂ ಇಲ್ಲವೆನ್ನುವಿರಲ್ಲಾಮ್ಮಾ?" ಎಂದು ಹೇಳಿ ಈಚೆಗೆ ಬಂದನು. "ನೀವು ಕೇಳಿದ್ದು ವೆಂಕಮ್ಮನ ಗಂಡನನ್ನು ಅಂತ ನಮಗೇನು ಗೊತ್ತು?" ಎಂದಳು ನೆರೆಮನೆಯವಳು.

ಬಂದ ಮನುಷ್ಯ ಬಂಗಾರಪ್ಪನ ಹತ್ತಿರ ಸ್ವಲ್ಪ ಹೊತ್ತು ಮಾತಾಡಿ, "ನೀನು ಈ ಊರಲ್ಲಿ ವೆಂಕಮ್ಮನ ಗಂಡ ಅಂತ ಚಲಾವಣೆಯಾಗುತ್ತ ನಮ್ಮೂರ ಮರ್ಯಾದೆ ತೆಗೆಯುವೆಯಲ್ಲಾ!" ಎಂದು ನಗಾಡಿ ಹೊರಟುಹೋದನು.

ಈ ಘಟನೆಯಿಂದ ಬಂಗಾರಪ್ಪನಿಗೆ ಬಹಳ ಅವಮಾನವಾಯಿತು. ತಾನು ಬಂಗಾರಪ್ಪನೆಂದು ಹೆಸರು ಪಡೆಯುವುದು ಹೇಗೆ ಎಂದು ತುಂಬ ಆಲೋಚನೆ ಮಾಡಿದನು. ಮನೆಯೊಳಗೆ ಕುಳಿತಿದ್ದಷ್ಟು ಕಾಲವೂ

ಎಂ. ಕೆ. ಈಶ್ವರರಾವ್

ಅದು ಸಾಧ್ಯವಾಗುವಂತಿಲ್ಲ. ಎದ್ದು ತಿರುಗಾಡಿ ಏನಾದರೂ ಕೆಲಸ ಮಾಡಬೇಕು.

ಮರುದಿನ ಬಂಗಾರಪ್ಪ ವೆಂಕಮ್ಮನಿಗಿಂತಲೂ ಮೊದಲೇ ಎದ್ದು ಎಮ್ಮೆಗಳನ್ನು ಹಿಂಡಿ, ಹಾಲು ಮಾರಿ ಬರುವೆನೆಂದು ಹೊರಟನು. ಅವನು ಒಂದು ವಾಡಿಕೆಯ ಮನೆಯ ಬಾಗಿಲನ್ನು ತಟ್ಟಿದಾಗ ಮನೆಯವಳು ಬಾಗಿಲು ತೆರೆದು, "ನಮಗೆ ವೆಂಕಮ್ಮ ಹಾಲು ತರುತ್ತಾಳೆ, ಬೇಡ" ಎಂದಳು.

ಆಗ ಅವಳ ಗಂಡ ಬಂಗಾರಪ್ಪನನ್ನು ಪರಿಕಿಸಿ ನೋಡಿ, "ಇವನು ವೆಂಕಮ್ಮನ ಗಂಡಕಣೇ, ಹಾಲು ಹಾಕಿಸಿಕೊ" ಎಂದನು.

ಅದನ್ನು ಕೇಳಿ ಬಂಗಾರಪ್ಪ "ಸತ್ತರೂ ನಿಮಗೆ ಹಾಲು ಹಾಕಲಾರೆ" ಎಂದು ಕೋಪದಿಂದ ಗೊಣಗುತ್ತ ಹಿಂದಿರುಗಿ ಬಂದುಬಿಟ್ಟನು. ವೆಂಕಮ್ಮನ ಗಂಡನೆಂಬ ಹೆಸರಿನಲ್ಲಿ ಹಾಲು ಮಾರಿ ಹಣ ಸಂಪಾದಿಸಲು ಅವನಿಗೆ ಇಷ್ಟವಿರಲಿಲ್ಲ.

ಅವನು ದಿನವಿಡೀ ಆಲೋಚನೆ ಮಾಡಿ ದೊಡ್ಡ ಗೌಡರ ಮನೆಗೆ ಹೋಗಿ ಕೆಲಸ ಕೇಳಬೇಕೆಂದು ನಿಶ್ಚಯಿಸಿದನು. ಈ ನಡುವೆ ಅವರ ಮನೆಯಲ್ಲಿ ಅವರ ಮಗನಿಗೆ ಮದುವೆಯಾದಾಗ ಎರಡು ದಿನಗಳವರೆಗೆ ವೆಂಕಮ್ಮನೇ ನಿರ್ವಾಹಕಳಾಗಿ ಕೆಲಸ ಮಾಡಿದ್ದಳು. ಆ ಎರಡು ದಿನಗಳೂ ಬಂಗಾರಪ್ಪ ಊಟದ ವೇಳೆಗೆ ಸರಿಯಾಗಿ ಅವರ ಮನೆಗೆ ಹೋಗಿದ್ದ.

ಬಂಗಾರಪ್ಪ ಬಂದ ಕೂಡಲೇ ಗೌಡರ ಮಗಳು "ಅಪ್ಪಾ, ವೆಂಕಮ್ಮನ ಗಂಡ ಬಂದಿದ್ದಾರೆ" ಎಂದು ಕೂಗಿ ತಂದೆಗೆ ಹೇಳಿದಳು.

ಮಗಳ ಕೂಗನ್ನು ಕೇಳಿ ಗೌಡರು ಹೊರಗೆ ಬರುವುದರೊಳಗೇ ಬಂಗಾರಪ್ಪ ಅಲ್ಲಿಂದ ಹೊರಟು ಹೋಗಿಬಿಟ್ಟ. ತಾನೆಂದಿಗೂ ವೆಂಕಮ್ಮನ ಗಂಡ ಅನ್ನಿಸಿಕೊಳ್ಳಲೇ ಬಾರದೆಂದು ತನ್ನೊಳಗೆ ಗಟ್ಟಿಯಾಗಿ ತೀರ್ಮಾನಿಸಿಕೊಂಡನು. ಕಡೆಗೆ ಹಣದ



ಲೇವಾದೇವಿಯವನ ಹತ್ತಿರ ಸ್ವಲ್ಪ ಹಣವನ್ನು ಸಾಲವಾಗಿ ಪಡೆದು ಸ್ವಂತವಾಗಿ ವ್ಯಾಪಾರ ಮಾಡಬೇಕೆಂದು ನಿಶ್ಚಯಿಸಿಕೊಂಡು ಅಲ್ಲಿಗೆ ಹೋದನು.

"ನೀನು ಯಾರೆಂಬುದು ನನಗೆ ಗೊತ್ತಿಲ್ಲ. ಒತ್ತೆಯಿಟ್ಟುಕೊಳ್ಳಲು ನಗನಟ್ಟು ಏನೂ ಇಲ್ಲದೆ ನಿನ್ನ ಮುಖ ನೋಡಿ ಸಾಲ ಕೊಡಬೇಕೆಂದರೆ ಹೇಗಪ್ಪಾ?" ಎಂದ ಲೇವಾದೇವಿಯವನು.

ಆಗ ಅಲ್ಲಿ ಕೆಲಸ ಮಾಡುವವನು "ಇವರು ನಮಗೆ ಹಾಲು ಹಾಕುವ ವೆಂಕಮ್ಮನ ಗಂಡಾರೀ. ಸಾಲ ವಾಪಾಸು ಕೊಡದೇಹೋದರೆ ಹಾಲಿನ ಲೆಕ್ಕದಲ್ಲಿ ಹಿಡಿದುಕೊಳ್ಳಬಹುದಲ್ಲಾ?" ಎಂದು ಶಿಫಾರಸು ಮಾಡಿದನು.

ಆ ಮಾತು ಕೇಳಿ ಬಡ್ಡಿಗೆ ಹಣ ಕೊಡಲು ಅವನು ಸಿದ್ಧನಾದರೂ, ಬಂಗಾರಪ್ಪ ತನಗೇನೂ ಅಗತ್ಯವಿಲ್ಲವೆಂದು ಹೇಳಿ ಅಲ್ಲಿಂದ ಹೊರಟುಬಿಟ್ಟದ್ದನ್ನು ನೋಡಿ ಅವರಿಬ್ಬರಿಗೂ ಆಶ್ಚರ್ಯವಾಯಿತು.

ಬಂಗಾರಪ್ಪನಿಗೆ ಜೀವನದ ಮೇಲೆಯೇ ವಿರಕ್ತಿ ಬಂದುಬಿಟ್ಟಿತು. ಸಂಸಾರದ ಗೊಡವೆಯೇ ಬೇಡ ವೆಂದುಕೊಂಡು, ಒಬ್ಬ ಬೈರಾಗಿಯ ಸಹಕಾರದಿಂದ ಸನ್ಯಾಸಿಯಾಗಿ ಊರೂರು ತಿರುಗತೊಡಗಿದನು.

ಆರು ತಿಂಗಳ ಮೇಲೆ ಅವನು ಅದೇ ಊರಿಗೆ ಮತ್ತೆ ಬಂದನು. ಬಿಸಿಲಿನಲ್ಲಿ ದಣಿದು ಬಂದ ಸನ್ಯಾಸಿ ಯನ್ನು ನೋಡಿ ಒಬ್ಬ ಗೃಹಸ್ಥನು ಹೆಂಡತಿಯೊಂದಿಗೆ, "ಸನ್ಯಾಸಿಗಳು ಬಿಸಿಲಿನಲ್ಲಿ ಬಂದಿದ್ದಾರೆ. ಸ್ವಲ್ಪ ಮಜ್ಜಿಗೆ ತಂದು ಕೊಡು" ಎಂದನು.

ಇನ್ನೊಂದು ಮನೆಯಲ್ಲಿ, "ಸನ್ಯಾಸಿಗೆ ಅಕ್ಕಿ ತಂದು ಹಾಕಮ್ಮಾ!" ಎಂದು ಒಂದು ಹುಡುಗಿ ಕೂಗಿ ಹೇಳಿದಳು.

"ಸನ್ಯಾಸಿಗೆ ಈ ಪೈಸೆ ಹಾಕಿ ಬಾ" ಎಂದು ಒಬ್ಬ ವ್ಯಾಪಾರಿ ಹುಡುಗನಿಗೆ ಹೇಳಿದ.

ಹೀಗೆ ಎಲ್ಲರೂ ತನ್ನನ್ನು ಬಂಗಾರಪ್ಪ ಎಂದು ಕರೆಯದಿದ್ದರೆ ಬೇಡ, ವೆಂಕಮ್ಮನ ಗಂಡ ಎಂದು ಹೇಳುವುದನ್ನು ಬಿಟ್ಟರಲ್ಲ, ಅಷ್ಟೇ ಸಾಕು ಎಂದು ಬಂಗಾರಪ್ಪನಿಗೆ ತೋರಿತು. ಹೀಗೆ ಸಮಾಧಾನ ಪಡುತ್ತ ಅವನು ಕೆರೆಯ ದಂಡೆಯ ಮೇಲೆ ಬರು ವಾಗ, ವೆಂಕಮ್ಮ ಅವನಿಗಿದಿರಾಗಿ ಬಂದು, "ಓಹೋ! ಇಲ್ಲಿದ್ದೀರೇನು? ನೀವು ಎಷ್ಟು ವೇಷ ಹಾಕಿದರೂ ನನ್ನ ಕಣ್ಣು ಕಟ್ಟಲಾರಿರಿ. ನಿಮಗೆ ಏನು ಕಡಿಮೆಯಾಯಿತು? ಹೊತ್ತು ಹೊತ್ತಿಗೆ ಬೇಯಿಸಿ ಹಾಕುತ್ತಿದ್ದೆನಾ ಇಲ್ಲವಾ? ಯಾಕೆ ಈ ಸನ್ಯಾಸಿವೇಷ ಹಾಕಿದಿರಿ?" ಎಂದು ಕೇಳಿದಳು.

ಊರಜನರಿಂದ ವೆಂಕಮ್ಮನ ಗಂಡನೆಂದು ಕರೆ ಯಿಸಿಕೊಳ್ಳಲು ಇಷ್ಟವಿಲ್ಲದೆ ಹೀಗೆ ಮಾಡಿಕೊಂಡೆ ನೆಂದು ಬಂಗಾರಪ್ಪ ನಿಜ ಸಂಗತಿಯನ್ನು ಹೇಳಿದ.

"ಸುಮ್ಮಸುಮ್ಮನೆ ನಿಮ್ಮನ್ನು ವೆಂಕಮ್ಮನ ಗಂಡಾ ಅಂತ ಜನರು ಯಾಕೆ ಹೇಳ್ತಾರೆ? ಹೆಂಡತಿ ಮಕ್ಕಳನ್ನು ಪೋಷಿಸುವಂಥಾದ್ದು ಗಂಡುಸಿನ ಹಣೇ ಬರಹ ಅಂತ ನಿಮಗೆ ಗೊತ್ತಿಲ್ಲದಿದ್ರೆ ನಾನೇನು ಮಾಡಲಿ? ನೀವು ನನ್ನ ಮೇಲೆ ಆಧಾರವಾಗಿದ್ದು ತಿಂದು ಮನೆ ಹಿಡಿದುಕೊಂಡೇ ಕೂತಿರಿ. ಇನ್ನು ನೀವೇ ಕಷ್ಟಪಟ್ಟು ದುಡಿದು ಸಂಪಾದಿಸಿ ನನ್ನನ್ನು ಪೋಷಣೆ ಮಾಡಿ, ಬಂಗಾರಪ್ಪನ ಹೆಂಡ್ತೀ ಅಂತ ಚಲಾವಣೆಯಾಗಲಿಕ್ಕೆ ನನ್ನದೇನೂ ಅಭ್ಯಂತರವಿಲ್ಲ. ನಿಮ್ಮ ಊರಿನಲ್ಲಿ ನೀವು ಬಂಗಾರಪ್ಪತಾನೇ? ಅಲ್ಲಿಗೇ ಹೋದರಾಯಿತು. ಎಲ್ಲಾ ಕಟ್ಟಿಕೊಂಡು ನಡೀರಿ" ಎಂದಳು ವೆಂಕಮ್ಮ.

ಈಗತಾನೇ ಬಂಗಾರಪ್ಪನಿಗೆ ಕಣ್ಣು ತೆರೆದ ಹಾಗಾ ಯಿತು. ಅವನು ಸನ್ಯಾಸಿಯ ವೇಷ ತೆಗೆದುಹಾಕಿ, ಹೆಂಡತಿಯನ್ನು ಕರೆದುಕೊಂಡು ತನ್ನ ಊರಿಗೇ ಹೋಗಿ ಬಂಗಾರಪ್ಪನಾಗಿ ಇರತೊಡಗಿದನು.





# ತಂದೆಯ ಅನುಮತಿ

ಗುಣಧರ ಮಹಾವೈಣಿಕ ವಿದ್ವಾಂಸನೆಂದು ಹೆಸರು ಪಡೆದಿದ್ದನು. ಕಾರಣವೇನೆಂದರೆ ಆ ಪ್ರಾಂತದಲ್ಲಿ ಅವನಿಗೆ ಸಾಟಿಯಾದ ವೈಣಿಕರಾರೂ ಇರಲಿಲ್ಲ. ವೀಣೆಯೊಂದಿಗೆ ಸೇರಿದ ಗಾನದ ಮಾಧುರ್ಯವು ಹೇಗಿರುವುದೆಂಬ ರುಚಿಯನ್ನು ಅಲ್ಲಿಯ ಜನರಿಗೆ ತೋರಿಸಿದವನೇ ಗುಣಧರ ವೈಣಿಕ. ಅಲ್ಲಿಯ ಜಮೀನ್ದಾರರು ತಮ್ಮ ಮನೆಯಲ್ಲಿ ಯಾವುದೇ ವಿಶೇಷ ಸಮಾರಂಭ ನಡೆಸಿದರೂ ಗುಣಧರನನ್ನು ಕರೆಯಿಸಿ ವೀಣೆಯ ಕಚೇರಿ ನಡೆಸದಿರುತ್ತಿದ್ದಿಲ್ಲ. ಇತರ ಸಮಯಗಳಲ್ಲಿ ಕೂಡಾ ಅವರು ತಮ್ಮ ಬಂಧು ಮಿತ್ರರ ವಿನೋದಕ್ಕಾಗಿ ಗುಣಧರನಿಂದ ವೀಣಾವಾದನ ಮಾಡಿಸಿ ಆನಂದಿಸುತ್ತಿದ್ದರು. ಅದರಿಂದ ತನಗೂ ಗುಣಧರನಿಗೂ ದೊಡ್ಡ ಹೆಸರು ಬರುವುದೆಂಬ ಸಂತೋಷ ಅವರಿಗಿತ್ತು.

ಗುಣಧರನ ಯೌವನವೆಲ್ಲವೂ ದೇಶ ಸಂಚಾರದಲ್ಲಿಯೇ ಕಳೆದು ಹೋದುದರಿಂದ ಅವನು ಮದುವೆ ಮಾಡಿಕೊಂಡು ಸ್ಥಿರಪಡಲಿಕ್ಕೆ ಬಹಳ ತಡವೇ ಆಯಿತು. ಆದುದರಿಂದ ಅವನ ಮಧ್ಯ ವಯಸ್ಸು ಮೀರಿದ ಮೇಲೆ ಅವನಿಗೆ ಒಬ್ಬ ಮಗನು ಹುಟ್ಟಿದನು. ಮಗನ ಹೆಸರು ಜಯಧರ. ಮಗನಿಗೆ ಮೂರನೇ ವಯಸ್ಸು ನಡೆಯುವಾಗ ಅವನ ತಾಯಿ ತೀರಿ ಹೋದಳು. ಆ ಮೇಲೆ ಅವನನ್ನು ಸಾಕಲು ದೊಡ್ಡಮ್ಮನೊಬ್ಬಳು ಸಹಾಯ ಮಾಡಿದಳು. ದೊಡ್ಡಮ್ಮ ಗಂಡನನ್ನು ಕಳೆದುಕೊಂಡ ವಿತಂತುವಾಗಿದ್ದಳು.

ಜಯಧರನು ಬೆಳೆಯುವಾಗ ತಂದೆಯೇ ಅವನಿಗೆ ಸಂಗೀತ ಶಿಕ್ಷಣವಿತ್ತನು. ಆದರೆ ಗುಣಧರನು ಯಾವಾಗಲೂ ಸಂಗೀತ ಸಭೆಗಳಿಗೂ, ಸಮ್ಮೇಳನಗಳಿಗೂ ಹೋಗುತ್ತಿದ್ದುದರಿಂದ ಜಯಧರನ ಬಾಧ್ಯತೆಯನ್ನು ಹೆಚ್ಚಾಗಿ ಅವನ ದೊಡ್ಡಮ್ಮನೇ ವಹಿಸಿಕೊಂಡಿದ್ದಳು.

ಒಟ್ಟಿನ ಮೇಲೆ ಅವರ ಕುಟುಂಬವು ಆರ್ಥಿಕವಾಗಿ ಅಷ್ಟೇನೂ ಉನ್ನತ ಸ್ಥಿತಿಯಲ್ಲಿರಲಿಲ್ಲ. ಏಕೆಂದರೆ ಗುಣಧರನು ತನ್ನ ಸಂಪಾದನೆಯಲ್ಲಿ ಸ್ವಲ್ಪವಾದರೂ ಕೂಡಿಸಿಡುವ ಆಲೋಚನೆ ಮಾಡದೆ ಕೈಯಲ್ಲಿದ್ದುದನ್ನೆಲ್ಲ ಮಿತ್ರರಿಗೂ ಕಲಾಕಾರರಿಗೂ ಧಾರಾಳವಾಗಿ ಖರ್ಚು ಮಾಡಿಕೊಂಡಿದ್ದನು. ಹೀಗಿರಲು, ಜಯಧರನು ಇಪ್ಪತ್ತು ವಯಸ್ಸು ಪ್ರಾಯ ತುಂಬಿ

ಪಿ. ಸಿ. ಸರ್ಕಾರ್, ಐಂದ್ರಜಾಲಿಕರು



ದಾಗ, ಒಳ್ಳೆಯ ಪ್ರತಿಭೆಯುಳ್ಳ ವೈಣಿಕನಾಗಿ ತಯಾರಾದನು. ಅವನ ವೀಣಾವಾದನವನ್ನು ಕೇಳಿ ಮೆಚ್ಚದವರೇ ಇರಲಿಲ್ಲ. ಆದರೆ ತಂದೆ ಗುಣಧರನು ಮಾತ್ರ, "ಎಷ್ಟುಮಂದಿ ನಿನ್ನನ್ನು ಮೆಚ್ಚಿಕೊಂಡರೇನು? ನಿನ್ನ ಗಾನಕಲೆಯ ಆಧಾರದಿಂದ ಜೀವನ ಸಾಗಿಸುವಷ್ಟು ಜಾಣ್ಮೆ ಇನ್ನೂ ನಿನಗೆ ಬಂದಿಲ್ಲ. ಅದು ಬಂದರೇನೇ ನೀನು ನನ್ನ ಹೆಸರು ಉಳಿಸುವವನಾಗಬಲ್ಲೆ. ಬೇಕಾದರೆ ನೀನು ಕಚೇರಿ ನಡೆಸು. ಇನ್ನೂ ತಾನೊಬ್ಬ ಅಭ್ಯಾಸಿ ಎಂದೇ ತಿಳಿದುಕೋ. ಅಷ್ಟೇ ಹೊರತು ಸಂಗೀತವನ್ನೇ ವೃತ್ತಿಯನಾಗಿಟ್ಟುಕೊಳ್ಳಬೇಡ. ನೀನು ಯಾವಾಗ ಸಂಗೀತವನ್ನೇ ಜೀವನ ವೃತ್ತಿಯನ್ನಾಗಿ ಹಿಡಿಯಬಹುದೋ ಆ ಕಾಲ ಬಂದಾಗ ಹೇಳುತ್ತೇನೆ" ಎಂದನು.

ಜಯಧರನಿಗೆ ತಂದೆಯ ಮಾತಿನ ಮೇಲೆ ತುಂಬ ವಿಶ್ವಾಸವಿತ್ತು. ಆದುದರಿಂದ ತಂದೆ ಹೇಳಿದಾಗಲೇ ವೈಣಿಕ ವೃತ್ತಿ ಹಿಡಿದು ಸಂಪಾದಿಸುವೆನೆಂದು ತಂದೆಯ ಕಾಲು ಮುಟ್ಟಿ ಪ್ರಮಾಣ ಕೂಡ ಮಾಡಿದ್ದನು. ಕಾಲ ಕಳೆಯಿತು. ಜಯಧರನು ಏನೋ ಕಾರ್ಯದ ನಿಮಿತ್ತವಾಗಿ ದೂರದ ಊರಿಗೆ ಪ್ರಯಾಣ ಮಾಡಬೇಕಾಯಿತು. ಗುಣಧರನೇ ಅವನನ್ನು ಹಾಗೆ ಕಳುಹಿಸಿದ್ದನು. ಜಯಧರನು ಹೋದ ಕಾರ್ಯ ಮುಗಿಸಿ ಹಿಂದಿರುಗಿಬರುವುದರೊಳಗೆ ಗುಣಧರನು ಹೃದಯಾಘಾತದಿಂದ ತೀರಿಹೋಗಿದ್ದನು. ಜಯಧರನು ಹಿಂದಿರುಗಿ ಬಂದು ತಂದೆಯ ಅಂತ್ಯಕಾಲದಲ್ಲಿ ತಾನು ಅವರ ಸಮೀಪ ಇಲ್ಲದೆ ಹೋದೆನಲ್ಲಾ ಎಂದು ಬಹಳ ದುಃಖಪಟ್ಟನು. ತರುವಾಯ ಅವನು ತನ್ನ ತಂದೆಯ ಚಿತ್ರಪಟವನ್ನು ಎತ್ತರದಲ್ಲಿ ಗೋಡೆಗೆ ಒರಗಿಸಿಟ್ಟು ಹೂಗಳಿಂದ ಪೂಜಿಸುತ್ತ ವೀಣಾವಾದನವನ್ನು ಸಾಧನೆ ಮಾಡುವುದರಲ್ಲೇ ಸಮಯ ಕಳೆಯತೊಡಗಿದನು.

ಅವನ ವೀಣಾವಾದನವನ್ನು ಕೇಳಿದವರು ಅವನು ತಂದೆಯನ್ನು ಮಿಂಚಿದ ವೈಣಿಕನೆಂದು ಹೇಳುತ್ತಿದ್ದರು. ಆದರೆ ಅವನು ವೈಣಿಕ ವೃತ್ತಿ ಹಿಡಿಯದೆ, ತನಗೆ ತಾನೇ ಬಾರಿಸಿಕೊಳ್ಳುವುದರಿಂದ ಯಾರಾದರೂ ಉತ್ಸವಗಳಿಗೋ ಸಮಾರಂಭಗಳಿಗೋ ಕರೆದರೆ ಪ್ರತಿಫಲವೇನೂ ತೆಗೆದುಕೊಳ್ಳದೆ ವೀಣಾವಾದನ ಮಾಡುವವನಾದುದುರಿಂದ, ಆರ್ಥಿಕವಾಗಿ ಅವನ ಪರಿಸ್ಥಿತಿ ತುಂಬ ಹೀನವಾಯಿತು. ಒಂದೊಂದು ದಿನ ಅವನು ಉಪವಾಸವಿರಲೂ ಬೇಕಾಯಿತು. ಅದಕ್ಕಾಗಿ ಅವನೇನೂ ಚಿಂತಿಸುತ್ತಿರಲಿಲ್ಲ.

"ಸಂಗೀತ ಕಚೇರಿ ನಡೆಸಿದರೆ ನೀನೇಕೆ ಪ್ರತಿಫಲ ತೆಗೆದುಕೊಳ್ಳುವುದಿಲ್ಲ?" ಎಂದು ಜಮೀನ್ದಾರರು ಅವನನ್ನು ಕೇಳಿದರು.

"ನನ್ನ ತಂದೆಯ ಅನುಮತಿ ಇಲ್ಲ. ಅವರು ನನಗೆ ಸಂಗೀತ ವೃತ್ತಿಯನ್ನು ಅವಲಂಬಿಸಿ ಬದುಕಲು ಅನುಜ್ಞೆ ಕೊಡಲಿಲ್ಲ. ಅಂಥಾ ಸ್ಥಿತಿ ಬಂದರೆ ಶರೀರ ಶ್ರಮದಿಂದಲೇ ಬದುಕಿಕೊಂಡಿದ್ದೇನು" ಎಂದ ನಿಶ್ಚಿತ

ಸ್ವರದಲ್ಲಿ ಜಯಧರ. ಅವನು ತಂದೆಯ ಕಾಲು ಹಿಡಿದು ಮಾಡಿದ ಪ್ರಮಾಣ ಎಲ್ಲರಿಗೂ ಗೊತ್ತಿತ್ತು.

ಈಗ ಅವನ ತಂದೆ ಬದುಕಿದ್ದರೆ ವೈಣಿಕ ವೃತ್ತಿ ಹಿಡಿಯಲು ಅವನಿಗೆ ಅನುಜ್ಞೆ ಕೊಟ್ಟೇ ಕೊಡುತ್ತಿದ್ದರು. ಹೇಗಾದರೂ ಅವನಿಗೆ ವೀಣಾಗಾನದಿಂದಲೇ ಜೀವನ ಸಾಗುವಂತೆ ಮಾಡಲು ಅವನ ಮಿತ್ರರೂ ಅಭಿಮಾನಿಗಳೂ ಬಹಳ ಆಲೋಚನೆ ಮಾಡುತ್ತಿದ್ದರು. ಆದರೆ ಸತ್ತುಹೋದ ತಂದೆಯ ಅನುಮತಿಯನ್ನು ಪಡೆಯುವುದೆಂದರೆ ಹೇಗೆಂದು ಯಾರಿಗೂ ಗೊತ್ತಾಗಲಿಲ್ಲ.

ಅದನ್ನು ಕುರಿತು ಜಮೀನ್ದಾರರು ತಮ್ಮ ಮಿತ್ರರೊಂದಿಗೆ ಮಾತಾಡಿದರು. ಅವರಲ್ಲಿ ಐಂದ್ರಜಾಲಿಕ ಸೋಮನಾಥನೂ ಇದ್ದನು. "ನಾವು ಜಯಧರನ ತಂದೆಯನ್ನು ಪ್ರಾರ್ಥಿಸಿ, ಜಯಧರನು ವೈಣಿಕವೃತ್ತಿ ಅವಲಂಬಿಸಲು ಅವರ ಅನುಮತಿ ಪಡೆದರೆ ಸರಿಹೋಗುತ್ತದಷ್ಟೆ? ಅದಕ್ಕೇಕೆ ಇಷ್ಟು ಯೋಚನೆ?" ಎಂದ ಸೋಮನಾಥ.

"ಅದು ಹೇಗೆ ಸಾಧ್ಯ? ಸತ್ತವರಿಂದ ಅನುಮತಿ ಪಡೆಯುವುದೆಂದರೇನು?" ಎಂದರು ಉಳಿದವರು.

"ಅದೆಲ್ಲಾ ನನಗೆ ಬಿಡಿ. ನೀವು ನನಗೆ ಸಹಾಯಕರಾಗಿದ್ದರೆ ಸಾಕು" ಎಂದ ಸೋಮನಾಥ.

ಆಮೇಲೆ ಜಮೀನ್ದಾರರು ಜಯಧರನೊಂದಿಗೆ, "ಊರಲ್ಲಿ ಒಬ್ಬ ಪೂಜಾರಿ ಇದ್ದಾನೆ. ಅವನು ದೇವರು ಮೈ ಮೇಲೆ ಬಂದಾಗ ಸತ್ತವರೊಂದಿಗೆ ಮಾತಾಡುತ್ತಾನೆ. ಸತ್ತವರಿಗೆ ದೇಹವಿಲ್ಲದುದರಿಂದ ಅವರ ಕೋರಿಕೆಗಳನ್ನು ಬದುಕಿರುವವರ ಮೂಲಕ ತಿಳಿಯಪಡಿಸುತ್ತಾರೆ ಗೊತ್ತಾ? ಹಾಗೆಯೇ ಆ ಪೂಜಾರಿಯ ಮೂಲಕ ನಿನ್ನ ತಂದೆಯಿಂದ ನೀನು ವೈಣಿಕವೃತ್ತಿ ಹಿಡಿಯಲು ಅನುಮತಿ ಪಡೆಯೋಣ, ಇದೇ ಎಲ್ಲರೂ ಒಪ್ಪುವದಾರಿ ಏನನ್ನುತ್ತೀ?" ಎಂದರು. ಜಯಧರನು ಸ್ವಲ್ಪ ಆಲೋಚಿಸಿ,



ದೊಡ್ಡಮ್ಮನೊಡನೆ ಆಲೋಚನೆ ಕೇಳಿ, ಅವಳೂ ಅದು ಒಳ್ಳೆಯದೆಂದು ಹೇಳಿದ ಮೇಲೆ, ಜಮೀನ್ದಾರರೊಂದಿಗೆ ತನ್ನ ಒಪ್ಪಿಗೆ ತಿಳಿಸಿದನು.

ಅದೃಷ್ಟವಶಾತ್ ಗುಣಧರನ ಶ್ರಾದ್ಧವು ಸಮೀಪಿಸಿತ್ತು. ಆ ದಿನ ಒಬ್ಬ ದೀರ್ಘಕಾಯ ವ್ಯಕ್ತಿಯನ್ನು ಕರೆದುಕೊಂಡು ಬಂದರು. ಅವನೇ ಧರಿಶಣೆಗೊಳ್ಳುವ ಪೂಜಾರಿ.

ಅವನು ಗುಣಧರನ ಚಿತ್ರದ ಇದಿರಿನಲ್ಲಿ ಸ್ವಲ್ಪ ಹೊತ್ತು ಧ್ಯಾನದಲ್ಲಿದ್ದು, ಮೆಲ್ಲಮೆಲ್ಲ ಮೈ ಮೇಲೆ ಬಂದವನಂತೆ ಧರಿಶಣೆಗೆ ತೊಡಗಿ ಹಾಗೆಯೇ ಓಲಾಡುತ್ತ ಬದಲಾದ ಕಂಠಸ್ವರದಿಂದ, "ಹೂಂ, ಸಣ್ಣ ಕಾಗದಚೂರು ತನ್ನೀ! ಅದನ್ನು ಲಕೋಟೆಯೊಳಗೆ ಹಾಕಿ ಮೇಲೆ ಅಂಟಿಸಿರೀ. ಅದನ್ನು ನನ್ನ ಚಿತ್ರದ ಮುಂದೆ ಇಡಿರೀ!" ಎಂದನು.

ಜಮೀನ್ದಾರನ ಮನೆಯಿಂದ ಕಾಗದದ ಲಕೋಟೆ ಕಾಗದಚೂರು ಎಲ್ಲಾ ಬಂದುವು, ಲಕೋಟೆಯೊಳಗೆ

ಚಿಕ್ಕ ಕಾಗದದ ತುಂಡನ್ನು ಇಟ್ಟು, ಲಕೋಟೆಯನ್ನು ಅಂಟಿಸಿ ಗುಣಧರನ ಚಿತ್ರಪಟದ ಮುಂದೆ ಇಟ್ಟರು. ಸ್ವಲ್ಪಹೊತ್ತಿನ ಮೇಲೆ ಕಣ್ಣುಮುಚ್ಚಿ ಕಂಪಿಸುತ್ತಿದ್ದ ಪೂಜಾರಿ ಕಣ್ಣು ತೆರೆದು "ಈಗ ಲಕೋಟೆ ಹರಿದು ಒಳಗಿನ ಕಾಗದ ನೋಡೀ!" ಎಂದ. ಹಾಗೆಯೇ ಲಕೋಟೆ ಹರಿದು ಒಳಗಿನ ಕಾಗದದ ತುಂಡನ್ನು ತೆಗೆದು ನೋಡಿದಾಗ, ಅದರಲ್ಲಿ ಗುಣಧರನ ಕೈ ಬರಹದಂತೆ, "ಜಯಧರನಿಗೆ, ವೈಣಿಕವೃತ್ತಿ ಅವ ಲಂಬಿಸಿ ಬದುಕಪ್ಪಾ. ನಿನ್ನ ತಂದೆ ಗುಣಧರ" ಎಂದಿತ್ತು! ಅದನ್ನು ನೋಡಿ ಎಲ್ಲರೂ ದೊಡ್ಡ ದಾಗಿ ಹರ್ಷಧ್ವನಿ ಮಾಡಿದರು.

ಜಯಧರನು ಆ ಕಾಗದ ತೆಗೆದುಕೊಂಡು ಕಣ್ಣೆ ಗೊತ್ತಿ ತಂದೆಯ ಚಿತ್ರಪಟಕ್ಕೆ ನಮಸ್ಕಾರ ಮಾಡಿ, "ಅಪ್ಪಾ, ನಿಮ್ಮ ಅನುಜ್ಞೆಯಾದುದರಿಂದ ಇನ್ನು ವೈಣಿಕವೃತ್ತಿಯನ್ನು ಹಿಡಿಯುತ್ತೇನೆ. ನಿಮ್ಮ ಖ್ಯಾತಿಗೆ ಕಳಂಕಬಾರದಂತೆ ಪ್ರಯತ್ನಿಸುತ್ತೇನೆ" ಎಂದನು.

ಆಮೇಲೆ ಜಯಧರನ ಸಂಗೀತ ಕಚೇರಿಗಳು ನಿರರ್ಗಳವಾಗಿ ನಡೆಯುತ್ತ, ಅವನಿಗೆ ಕನಕವರ್ಷಣ ವಾಗುತ್ತಿರಲು ಸುಖವಾಗಿದ್ದನು.

ಇದೆಲ್ಲವೂ ಸೋಮನಾಥನ ಇಂದ್ರಜಾಲದ ಮಹಿಮೆ. ಅವನು ಒಂದೇ ಪ್ರಮಾಣದ ಎರಡು ಬಿಳೀ ಕಾಗದದ ತುಂಡು ತೆಗೆದುಕೊಂಡು ಒಂದರ ಮೇಲೆ ಗುಣಧರನ ಕೈಬರೆಹವನ್ನನುಸರಿಸಿ ಬರೆದನು. ಹಾಗೆ ಬರೆದ ಕಾಗದದ ತುಂಡನ್ನು ಒಂದು ಸಾಧಾ ರಣ ಲಕೋಟೆಯಲ್ಲಿ ಲಕೋಟೆಯ ಮುಚ್ಚಳದ ಕಡೆ ಯಲ್ಲಿಟ್ಟನು. ಆಮೇಲೆ ಅಂತಹುದೇ ಮತ್ತೊಂದು ಲಕೋಟೆಯನ್ನು ತೆಗೆದುಕೊಂಡು ಅದರ ಎರಡು ಬದಿಗಳನ್ನೂ ಕೆಳಭಾಗವನ್ನೂ ತೆಗೆದುಹಾಕಿ ವಿಳಾಸ ಬರೆಯುವಲ್ಲಿ ಮುಚ್ಚಳದ ಭಾಗ ಬರುವಂತೆ ಮೊದ ಲನೇ ಲಕೋಟೆಯೊಳಗೆ ಇಟ್ಟನು. ಹೀಗೆ ಮಾಡಿ ದುದರಿಂದ ಕಾಗದದ ಲಕೋಟೆಯಲ್ಲಿ ಒಂದು ರಹಸ್ಯ ಅರೆ ಏರ್ಪಟ್ಟಿತು. ಬಿಳೀ ಕಾಗದದ ತುಂಡನ್ನು ಎಲ್ಲರೂ ಪರೀಕ್ಷಿಸಿ ಲಕೋಟೆಯೊಳಗೆ ಹಾಕುವಾಗ ಲಕೋಟೆ ಖಾಲಿಯಾಗಿರುವಂತೆಯೇ ಕಾಣುತ್ತದೆ. ಲಕೋಟೆಯನ್ನು ಅಂಟಿಸುವಾಗ ಸೋಮನಾಥನು ಎರಡು ಮುಚ್ಚಳಗಳನ್ನೂ ಸೇರಿಸಿ ಅಂಟಿಸಿಬಿಟ್ಟನು. ತರುವಾಯ ಲಕೋಟೆಯನ್ನು ಹರಿದು ಕಾಗದ ವನ್ನು ಮೇಲೆ ತೆಗೆದಾಗ ಬಿಳೀ ಕಾಗದದ ತುಂಡು ರಹಸ್ಯ ಅರೆಯಲ್ಲೇ ಉಳಿದು ಬರೆಯಲ್ಪಟ್ಟ ಕಾಗ ದದ ತುಂಡು ಮೇಲೆ ಎತ್ತಲ್ಪಟ್ಟಿತು. ಆ ಕೂಡಲೇ ಜಮೀನ್ದಾರನು ಆ ಲಕೋಟೆಯನ್ನು ತನ್ನ ಜೇಬಿ ನೊಳಗೆ ಸೇರಿಸಿಕೊಂಡನು. ಗುಟ್ಟು ಗುಟ್ಟಾಗಿಯೇ ಉಳಿದುಹೋಯಿತು.





# ನಿಜವಾದ ಸುಳ್ಳು

ಶರ್ಯಾತಿ ವಂಶದಲ್ಲಿ ಹುಟ್ಟಿದ ವತ್ಸರಾಜ ವೀತಹವ್ಯನಿಗೆ ನೂರು ಜನ ಕುಮಾರರು. ಅವನು ತನ್ನ ಕುಮಾರರೊಂದಿಗೆ ಭೂಮಿಯನ್ನೆಲ್ಲಾ ಜಯಿಸಲು ಹೊರಟನು.



ಅವರು ಕಾಶೀರಾಜನ ಮೇಲೆ ದಾಳಿಮಾಡಿ, ಕಾಶೀರಾಜನಾದ ಹರ್ಯಾಶ್ವನನ್ನೂ, ಅವನ ಮಗ ಸುದೇವನನ್ನೂ ಕೊಂದರು. ಸುದೇವನ ಮಗ ದಿವೋದಾಸನು ತಪ್ಪಿಸಿಕೊಂಡು ಓಡಿ ಹೋದನು.



ದಿವೋದಾಸನು ಮತ್ತೊಂದು ರಾಜಧಾನಿಯನ್ನು ನಿರ್ಮಿಸಿಕೊಂಡುದನ್ನು ತಿಳಿದು, ವೀತಹವ್ಯನ ಮಗಂದಿರು ಅದನ್ನು ನಾಶಮಾಡಿ, ದಿವೋದಾಸನನ್ನು ಓಡಿಸಿಕೊಂಡು ಹೋದರು.



ಕಡೆಗೆ ದಿವ್ವೋದಾಸನು ಪತ್ನೀಸಹಿತನಾಗಿ ಭರದ್ವಾಜಋಷಿಯ ಆಶ್ರಮದಲ್ಲಿ ತಲೆಮರೆಸಿಕೊಂಡನು. ತನ್ನವರೆಲ್ಲಾ ತೀರಿಹೋಗಿ, ತನಗೆ ವಂಶಾಂಕುರವೂ ಹೋಯಿತೆಂದು ದಿವ್ವೋದಾಸನು ತುಂಬಾ ಚಿಂತಿಸಿದನು.



ದಿವ್ವೋದಾಸನಿಗೆ ಪುತ್ರೋದಯವಾಗಿ, ವಂಶವು ನಿಲ್ಲಲಿಕ್ಕಾಗಿ ಯಜ್ಞಮಾಡುವಂತೆ ಭರದ್ವಾಜನು ಆಲೋಚನೆ ಹೇಳಿದನು.



ಹಾಗೆ ಮಾಡಿದ ಯಜ್ಞದ ಫಲವಾಗಿ ದಿವ್ವೋದಾಸನಿಗೆ ಒಬ್ಬ ಕುಮಾರನು ಹುಟ್ಟಿದನು. ಅವನಿಗೆ ಪ್ರತರ್ದನನೆಂದು ಹೆಸರಿಟ್ಟರು. ಅವನು ಪರಾಕ್ರಮವಂತನಾಗಿ ಬೆಳೆದನು.









ಪ್ರತರ್ದನನು ಕ್ಷತ್ರಿಯೋಚಿತವಾದ ಎಲ್ಲಾ ವಿದ್ಯೆಗಳಲ್ಲಿಯೂ ಒಳ್ಳೆಯ ಪ್ರವೀಣನಾದನು.



ಒಂದು ದಿನ ದಿವೋದಾಸನು ಪ್ರತರ್ದನನೊಂದಿಗೆ ತನಗೆ ಉಂಟಾದ ಪರಾಭವವನ್ನೆಲ್ಲಾ ಹೇಳಿ "ಅಪ್ಪಾ, ನನಗಾಗಿಯಾದರೂ ನೀನು ಹಗೆ ತೀರಿಸಿಕೊಳ್ಳಬೇಕು" ಎಂದನು.







ಪ್ರತರ್ದನನು ಕಾಲಕ್ರಮದಲ್ಲಿ ಸೇನೆಯನ್ನು ಕೂಡಿಸಿ, ವೀತಹವ್ಯನು ಇದಿರುನೋಡದಿರುವ ಹೊತ್ತು ನೋಡಿ ಅವನ ರಾಜ್ಯದ ಮೇಲೆ ಬಿದ್ದನು. ವೀತಹವ್ಯನ ನೂರು ಮಂದಿ ಕುಮಾರರೂ ಯುದ್ಧದಲ್ಲಿ ಸತ್ತರು. ವೀತಹವ್ಯನು ಓಡಿಹೋದನು.



ಹಾಗೆ ಓಡಿದ ವೀತಹವ್ಯನು ಭೃಗುಮಹರ್ಷಿಯ ಆಶ್ರಮದಲ್ಲಿ ಅಡಗಿ ಕುಳಿತನು. ಭೃಗು ಅವನಿಗೆ ತತ್ವೋಪದೇಶ ಮಾಡಿ ತಪಸ್ಸು ಮಾಡಲು ಪ್ರೇರೇಪಿಸಿದನು.



ವೀತಹವ್ಯನನ್ನು ಕೊಲ್ಲಬೇಕೆಂದು ದೃಢಸಂಕಲ್ಪ ದಿಂದ ಪ್ರತರ್ದನನು ಭೃಗುವಿನ ಆಶ್ರಮಕ್ಕೆ ಬಂದು, "ನಿಜವಾದ ಕ್ಷತ್ರಿಯನಾದರೆ ವೀತ ಹವ್ಯನು ನನ್ನೊಂದಿಗೆ ಯುದ್ಧಮಾಡಲಿ!" ಎಂದು ಭೃಗುವಿನೊಂದಿಗೆ ಹೇಳಿದನು. "ಇಲ್ಲಿ ರುವವರೆಲ್ಲಾ ಬ್ರಾಹ್ಮಣರೇ, ಕ್ಷತ್ರಿಯರಾರೂ ಇಲ್ಲ!" ಎಂದನು ಭೃಗು.



ಭೃಗು ಸುಳ್ಳು ಹೇಳುವನೆಂದು ಪ್ರತರ್ದನನು ನಂಬಲಾರದೆ ಹೋದನು. ಅವನು ವೀತಹವ್ಯ ನನ್ನು ನೋಡಿದ ಕೂಡಲೇ ಅವನು ಪೂರ್ತಿ ಬ್ರಾಹ್ಮಣನಾಗಿ ಬದಲಾಯಿಸಿದ್ದಾನೆಂದು ಸ್ಪಷ್ಟ ವಾಯಿತು. ಕ್ಷತ್ರಿಯನು ಬ್ರಾಹ್ಮಣನಾಗಿ ಬದ ಲಾಯಿಸಿದ್ದನು!

# ಕಥಾ ಶೀರ್ಷಿಕೆಯ ಸ್ಪರ್ಧೆ

**ಈ ಕಥೆಗೆ ಒಳ್ಳೆಯ ಶೀರ್ಷಿಕೆಯನ್ನು ಇಟ್ಟು ರೂ. ೨೫ ಗೆಲ್ಲಿರಿ!**

?

ಒಬ್ಬ ಮಹಾರಾಜನ ಬಳಿಗೆ ಇಬ್ಬರು ಚಿತ್ರಕಾರರು ಬಂದರು. ಅವರಿಬ್ಬರೂ ರಾಜನು ಮಂದಹಾಸದಲ್ಲಿರುವಂತೆ ಒಂದೊಂದು ಚಿತ್ರ ಬರೆದು ರಾಜನಿಗೆ ಸಮರ್ಪಿಸಿದರು.

ಪೂರ್ವ ದಿಕ್ಕಿನಿಂದ ಬಂದ ಚಿತ್ರಕಾರನ ಚಿತ್ರದಲ್ಲಿ ರಾಜನ ಮುಖದಲ್ಲಿ ಎಂದಿನಂತಿರುವುದಕ್ಕಿಂತಲೂ ಹೆಚ್ಚು ಮಡಿಕೆಗಳನ್ನಿರಿಸಿದ್ದ. ನಗುತ್ತಿದ್ದರೆ ಅಳುತ್ತಿರುವ ಹಾಗೆ ಕಾಣುತ್ತಿತ್ತು.

ಪಶ್ಚಿಮದ ಚಿತ್ರಕಾರನು ಬರೆದ ಚಿತ್ರದಲ್ಲಿ ರಾಜನ ಮುಖವು ಇರುವ ಹಾಗೆಯೇ ಇದೆ. ನಗುತ್ತಿರುವ ರಾಜನ ಮುಖವು ಇನ್ನಷ್ಟು ಸುಂದರವಾಗಿ ಕೂಡಾ ಕಂಡಿತು.

ಅಂತೆಯೇ ರಾಜನು ಪಶ್ಚಿಮದ ಚಿತ್ರಕಾರನಿಗೆ ದೊಡ್ಡ ಬಹುಮಾನ ಕೊಟ್ಟನು. ಪೂರ್ವ ದಿಕ್ಕಿನ ಚಿತ್ರಕಾರನಿಗೆ ಏನೂ ಕೊಡಲಿಲ್ಲ. ಆಮೇಲೆ ರಾಜನು ಪಶ್ಚಿಮದ ಚಿತ್ರಕಾರನ ಚಿತ್ರವನ್ನು ತದೇಕದೃಷ್ಟಿಯಿಂದ ನೋಡುತ್ತ ಮಂದಹಾಸವಾಗಿ ನಕ್ಕನು.

ಕೂಡಲೇ ಅವನ ಮುಖದ ತುಂಬಾ ಮಡಿಕೆಗಳೇರ್ಪಟ್ಟು, ಆ ನಗು ಅಳುವ ಹಾಗೆಯೇ—ಪೂರ್ವ ದಿಕ್ಕಿನ ಚಿತ್ರಕಾರನ ಚಿತ್ರದ ಹಾಗೆಯೇ ಇದ್ದಿತು,

★ ★ ★

ಮೇಲಿನ ಕಥೆಗೆ ಒಳ್ಳೆಯ ಹೆಸರನ್ನು ಆಲೋಚನೆ ಮಾಡಿ, ಪೋಸ್ಟುಕಾರ್ಡಿನಲ್ಲಿಯೇ ನಿಮ್ಮ ಹೆಸರು ವಿಳಾಸದೊಂದಿಗೆ ಬರೆದು, "ಕಥಾ ಶೀರ್ಷಿಕೆಯ ಸ್ಪರ್ಧೆ" ಚಂದಮಾಮ, ೨ & ೩ ಆರ್ಕಾಟ್ ರೋಡು, ವಡಪಳನಿ, ಮದ್ರಾಸು - ೬೦೦೦೨೬ ಎಂಬ ವಿಳಾಸಕ್ಕೆ ಕಳುಹಿಸಿರಿ.

ಇದು ಸೆಪ್ಟೆಂಬರ್ ೧೫ರೊಳಗೆ ತಲಪಬೇಕು. ಅದರಲ್ಲಿ "ಫೋಟೋ ಶೀರ್ಷಿಕೆಯ ಸ್ಪರ್ಧೆ" ಬರೆದಿರಬಾರದು. ಫಲಿತಾಂಶ '೭೮ ನವೆಂಬರ್ ಚಂದಮಾಮದಲ್ಲಿ ಪ್ರಕಟವಾಗುತ್ತದೆ.

---

ಜುಲೈ ಸ್ಪರ್ಧೆಯ ಫಲಿತಾಂಶ: ಮಾರಕವಾದ ಸಾವಿನ ಕೂಗು

ಕಳುಹಿಸಿದವರು: ಶ್ರೀಮತಿ ಪಿ. ಎಸ್. ನಂದ, ೫೮, ಗಾಂಧಿಬಜಾರ್ ಮೈನ್‌ರೋಡು, ಬೆಂಗಳೂರು

# ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. ೨೫

## ಗೆದ್ದ ಶೀರ್ಷಿಕೆಗಳು ೧೯೭೮ ನವೆಂಬರ್ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ



M. Natarajan



Nirmal Kumar Tak

- ★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು.
- ★ ಸೆಪ್ಟೆಂಬರ್ ೧೫ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ.
- ★ ನಮಗೆ ಬಂದ ಶೀರ್ಷಿಕೆಗಳಲ್ಲಿ ಅತ್ಯುತ್ತಮವಾದ ಒಂದು ಜತೆಗೆ ರೂಪಾಯಿ ೨೫ ಬಹುಮಾನ.
- ★ ಶೀರ್ಷಿಕೆಗಳನ್ನು ಪೋಸ್ಟುಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು. ವಿಳಾಸ: ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು - ೬೦೦೦೨೬

---

## ಜೂಲೈ ಸ್ಪರ್ಧೆಯ ಫಲಿತಾಂಶ :

ಮೊದಲನೇ ಫೋಟೋ : ತಿಂಡಿಯಿದೆ, ಯಾರದ್ರೂ ಬಂದ್ರೆ ?

ಎರಡನೇ ಫೋಟೋ: ನೋಡ್ತಾ ಇರ್ತೀನಿ, ನಂಗೂ ತಾ

ಕಳುಹಿಸಿದವರು : ಪ್ರಕಾಶ ಅ. ಕೋಳಿ,

ಮನೆನಂಬ್ರ ೧೧೫೧, ಬನಗಾರಗಲ್ಲಿ, ಗೋಕಾಕ್, ಬೆಳಗಾಂವ

Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 2 & 3, Arcot Road, Madras-600 026 (India). Controlling Editor : NAGI REDDI.

చందమామ අම්බිලි මාමා




Chandamama, now published in twelve Indian languages including English and entertaining millions of readers in India, makes its debut in Srilanka. To the President and people of Srilanka, we dedicate our inaugural issue in Sinhala.



# අම්බිලි මාමා

AMBILIMAMA




## CHANDAMAMA

***the monthly magazine for children through which the old become young and the young remain young.***

চাঁদমামা CHANDAMAMA चांदोबा

# ಜೆಮ್ಸ್‌ನ ಮೋಜನ್ನು ಸವಿಯಿರಿ!

## ಗೆಲ್ಲಲು ಅದೃಷ್ಟದ 1001 ಬಹುಮಾನಗಳಿವೆ!

ಕಾಣೆಯಾದ ಸಂಖ್ಯೆ ಯಾವುದು?

| | | | |
|---|---|---|---|
| | 5 | 7 | |
| ? | | | 16 |
| 8 | | | 20 |
| | 14 | 10 | |




ದಯವಿಟ್ಟು ಉತ್ತರವನ್ನು ಮತ್ತು ನಿಮ್ಮ ಹೆಸರು ಹಾಗೂ ವಿಳಾಸವನ್ನು ಇಂಗ್ಲಿಶ್‌ನಲ್ಲಿ ಮಾತ್ರ ಬರೆಯಿರಿ — ಅಚ್ಚು ಅಕ್ಷರಗಳಲ್ಲಿ ಸ್ಪಷ್ಟವಾಗಿ ಬರೆಯಿರಿ, ಈ ವಿಳಾಸಕ್ಕೆ ಉತ್ತರಗಳನ್ನು ಕಳಿಸಿ:

"Fun with Gems"
Dept. D-16
Post Box No. 56.
Thane 400 601.
Maharashtra

ಉತ್ತರಗಳು ತಲುಪಲು ಕೊನೆಯ ತಾರೀಖು:
17.11.1978

## ತ್ವರೆ ಮಾಡಿರಿ!

ನಿಮ್ಮ ಉತ್ತರವನ್ನು, ಕ್ಯಾಡ್‌ಬರಿಸ್ ಜೆಮ್ಸ್‌ನ ಒಂದು ಖಾಲಿಯಾದ ದೊಡ್ಡ (30 ಗ್ರಾಂ) ಪ್ಲಾಸ್ಟಿಕ್ ಪ್ಯಾಕೆಟ್‌ನ ಜೊತೆಗೆ ಕಳಿಸಿರಿ. ಮೊದಲ 1001 ಸರಿ ಉತ್ತರಗಳನ್ನು ಕಳಿಸಿದವರಿಗೆ, ಪ್ರತಿಯೊಬ್ಬರಿಗೂ, 11 ರೂಪಾಯಿಯ ಸ್ಟೇಟ್ ಬ್ಯಾಂಕ್ ಉಡುಗೊರೆ ಚೆಕ್ ಕೊಡಲಾಗುವುದು.

**ಚಾಕ್‌ಲೇಟ್ ಉಳ್ಳ ಬಣ್ಣ ಬಣ್ಣದ ಕ್ಯಾಡ್‌ಬರಿಸ್ ಜೆಮ್ಸ್**

CHAITRA-C-193 KAN



# ಕರಡಿಕೆಂಗಣ್ಣ

೨

[ಕಾಳೀವರ್ಮನೆಂಬ ಕ್ಷತ್ರಿಯ ಯುವಕನು ಉದ್ಯೋಗ ಸಂಪಾದಿಸಲು ರಾಜಧಾನೀ ನಗರಕ್ಕೆ ಹೋಗುತ್ತಿದ್ದಾಗ, ದಾರಿಯಲ್ಲಿ ಗ್ರಾಮಸ್ಥರಿಂದ ಕೊಳ್ಳೇಗಾರರ ಸಂಗತಿ ಗೊತ್ತಾಯಿತು. ಕಾಳೀವರ್ಮನು ಗ್ರಾಮಸ್ಥರ ಸಹಾಯ ದಿಂದ ಕೊಳ್ಳೇಗಾರರನ್ನು ಬೇಟೆಯಾಡಿದನು. ಬಳಿಕ ಅವನು ನಗರಕ್ಕೆ ಸಮೀಪಿಸಲು, ಜಿತಕೇತು ರಾಜನ ಭಟರು ಅವನನ್ನು ರಾಜದ್ರೋಹಿ ಎಂಬ ಅಪವಾದದ ಮೇಲೆ ಹಿಡಿದುಕೊಂಡರು.]

**ಚಂ**ದ್ರಶಿಲಾ ನಗರದ ಅಶ್ವ ಸೈನಿಕರು ಕಾಳೀವರ್ಮನನ್ನು ಬಂಧಿಸಿ ತೆಗೆದುಕೊಂಡು ನಗರವನ್ನು ಪ್ರವೇಶಿಸಿದರು. ಒಬ್ಬನೇ ಒಬ್ಬನನ್ನು ಕುದುರೆಯ ಮೇಲೆ ಕಟ್ಟಿಹಾಕಿ ತೆಗೆದುಕೊಂಡು ಹೋಗುವಾಗ, ಬಂಧಿಸಲ್ಪಟ್ಟವನು ನಿರ್ಭೀತಿಯ ಮುಖದಿಂದ ಏನೂ ಹೇಳದೆ ಸುಮ್ಮನಿರುವುದನ್ನು ನೋಡಿ ಪುರಜನರಿಗೆ ಆಶ್ಚರ್ಯವೂ ಕುತುಹಲವೂ ಆಯಿತು. ಯಾವನೋ ಒಬ್ಬ ವೀರನನ್ನು ರಾಜಭಟರು ಕೊಡೊಯ್ಯುತ್ತಿದ್ದಾರೆ ಎಂಬ ಸುದ್ದಿ ನಾಲ್ಕು ಸುತ್ತಲೂ ಹರಡಿತು. ಎಲ್ಲರೂ ಸೇರಿಕೊಂಡು ಅವರ ಹಿಂದಿಂದೇ ಹೊರಟರು.

"ಯಾರಿವನು? ಏನು ಮಾಡಿದ?" ಎಂದು ಅವರಲ್ಲಿ ಕೆಲವರು ಧೈರ್ಯದಿಂದ ಅಶ್ವಿಕರ ನಾಯಕನನ್ನು ಕೇಳಿದರು.

ಅಶ್ವೀಕರ ನಾಯಕನು ವಿಜಯ ಗರ್ವದ ಮುಖ ಮಾಡಿಕೊಂಡು, "ಈ ಬಂಧಿತನ ಹೆಸರು ಕಾಳೀವರ್ಮ. ನಮ್ಮ ರಾಜ್ಯಕ್ಕೂ ನೆರೆದೇಶವಾದ ದುರ್ಮುಖನ ಉದಯಗಿರಿ ರಾಜ್ಯಕ್ಕೂ ಪ್ರಬಲ ಶತ್ರು. ಅರಣ್ಯದ ಮಧ್ಯದಲ್ಲಿದ್ದ ಇವನನ್ನು ಹಿಡಿಯ ಬೇಕಾದರೆ ನಮಗೆ ಏಳು ಕೆರೆ ನೀರು ಕುಡಿಸಿಬಿಟ್ಟ!" ಎಂದು ಹೇಳಿ ತನ್ನ ಸಹಚರರನ್ನು "ಅಲ್ಲವೇನೋ"



ಎಂಬಂತೆ ನೋಡಿದನು. "ಹೌದೌದು. ನೋಡಿದರೆ ಪಾಪದವನ ಹಾಗಿದ್ದಾನೆಂತಲೋ? ಬಿಟ್ಟರೆ ಸಾಕು, ಹುಲಿಯಾಗಿ ಹಾರುತ್ತಾನೆ." ಎಂದರು ಉಳಿದ ಆಶ್ವಿಕರು.

ಚಂದ್ರಕಲಾ ಉದಯಗಿರಿ ಎರಡು ರಾಜ್ಯಗಳ ಶತ್ರು! ಇವನ ಕಥೆ ಏನಿರಬಹುದೆಂದು ತಿಳಿಯಲು ಕೆಲ ಮಂದಿ ಪುರಜನರು ಆಶ್ವಿಕರ ಹಿಂದೆಯೇ ರಾಜ ಭವನದ ವರೆಗೂ ನಡೆದರು.

ಆಶ್ವಿಕ ನಾಯಕನು ಬಂದಿಯೊಂದಿಗೆ ತನ್ನ ಸಹ ಚರರನ್ನು ಭವನದ ಆವರಣದಲ್ಲಿ ನೋಡಿಕೊಂಡಿರು ವಂತೆ ಹೇಳಿ, ರಾಜಭವನದೊಳಗೆ ಹೋದನು. ಅಲ್ಲಿದ್ದ ದ್ವಾರದ ಭಟನೊಂದಿಗೆ, ಬಹು ಮುಖ್ಯ ಸಮಾಚಾರವೆನ್ನುತ್ತ, ತಾನು ರಾಜದ್ರೋಹಿಯಾದ ಕಾಳೀವರ್ಮನನ್ನು ಬಂಧಿಸಿ ತಂದ ಸಮಾಚಾರವನ್ನು ಜಿತಕೇತು ಮಹಾರಾಜನಿಗೆ ಹೇಳಿ ಕಳುಹಿಸಿದನು. ಆ ಸಮಯದಲ್ಲಿ ಜಿತಕೇತು ಮಹಾರಾಜನು ಪ್ರಧಾನ ಮಂತ್ರಿಯೊಂದಿಗೆ, ಉದಯಗಿರಿ ರಾಜನು ದಂಡೆತ್ತಿ ಬರುವೆನೆಂದು ದೂತನ ಮೂಲಕ ಕಳುಹಿ ಸಿದ ಪತ್ರವನ್ನು ಕುರಿತು ಮಾತಾಡಿಕೊಂಡಿದ್ದನು. ಕಾಳೀವರ್ಮ ಸಿಕ್ಕಿದನೆಂಬ ಸಮಾಚಾರ ಕೇಳಿದ ಕೂಡಲೇ ಅವನು ಅತ್ಯಾನಂದದಿಂದ ಮಂತ್ರಿಯನ್ನು ನೋಡಿ, "ಮಹಾಮಂತ್ರೀ! ಈ ಕಾಳೀವರ್ಮನೆಂಬ ಕ್ಷತ್ರಿಯ ಯುವಕನ ಕಾರಣದಿಂದ ನಾವು ದುರ್ಮುಖಿ ರಾಜನೊಂದಿಗೆ ಸುಮ್ಮ ಸುಮ್ಮನೆ ಯುದ್ಧ ಮಾಡ ಬೇಕಾಗಿ ಬಂತು. ಅವನೀಗ ಸಿಕ್ಕಿಬಿದ್ದ. ಅವನನ್ನು ಜೀವದೊಂದಿಗೆ ಹೆಡೆಮುರಿಗೆ ಕಟ್ಟಿ ದುರ್ಮುಖಿನ ಬಳಿಗೆ ಕಳುಹಿಸುವುದು ಒಳಿತೋ. ಗಲ್ಲಿಗೇರಿಸಿ ಶವ ವನ್ನು ಕಳುಹಿಸುವುದು ಒಳಿತೋ? ಯೋಚಿಸಿ ಹೇಳಿರಿ." ಎಂದು ಕೇಳಿದನು.

"ಮಹಾರಾಜರೆ, ದರ್ಮುಖಿನ ಪತ್ರದಲ್ಲಿರುವ ವಿಷಯಗಳಿಂದ ಅವನಿಗೆ ನೀವು ಹೇಳಿದ ಎರಡರಲ್ಲಿ ಯಾವುದಾದರೂ ಸಮ್ಮತಿಯೇ ಎಂದು ತಿಳಿಯುತ್ತದೆ. ಆದರೆ ನಮಗೆ ಈಗ ಸಿಕ್ಕಿದವನು ದರೋಡೆಕೋರ ರನ್ನು ನಮ್ಮ ರಾಜ್ಯದಿಂದ ಉದಯಗಿರಿ ರಾಜ್ಯಕ್ಕೆ ಓಡಿಸಿದ ಕಾಳೀವರ್ಮನೇ ಎಂದು ರುಜುವಾಗ ಬೇಕಲ್ಲವೇ? ಅದರಲ್ಲಿ ತಪ್ಪಾದರೆ ನಾವು ಮಾತು ತಪ್ಪಿದೆವೆಂಬ ಅಪರಾಧಕ್ಕೊಳಗಾಗಿ ದುರ್ಮುಖಿನಿಂದ ಇನ್ನಷ್ಟು ತೊಂದರೆಗಳನ್ನು ಅನುಭವಿಸಲೇಬೇಕಾ ದೀತು. ಇವನೇ ರಾಜದ್ರೋಹಿ ಕಾಳೀವರ್ಮನೆಂಬು ದನ್ನು ರುಜುಪಡಿಸಿಕೊಳ್ಳಬೇಕಾದುದು ಮುಖ್ಯ." ಎಂದನು ಮಂತ್ರಿ.

"ನಮ್ಮ ಆಶ್ವಿಕರ ನಾಯಕನು ಅಂತಹ ತಪ್ಪು ಮಾಡಲಾರ." ಎಂದ ಮಹಾರಾಜ.

"ಬೇಕೆಂದು ತಪ್ಪು ಮಾಡಲಾರ. ಈ ವಿಶಾಲ ವಾದ ಚಂದ್ರಶಿಲಾ ನಗರದಲ್ಲಿ ಎಷ್ಟು ಮಂದಿ ಕಾಳೀ ವರ್ಮ ಹೆಸರಿನವರಿರುವರೋ ಏನೋ. ಆದುದ ರಿಂದ ತಾವೇ ಸ್ವಂತವಾಗಿ ವಿಚಾರಿಸಿಕೊಂಡು ಶಿಕ್ಷಿಸು

ವುದು ಒಳ್ಳೆಯದು. ನಿರಪರಾಧಿಗಳನ್ನು ಶಿಕ್ಷಿಸಿ ಏನು ಪ್ರಯೋಜನ ? " ಎಂದ ಮಂತ್ರಿ.

ಅದಕ್ಕೆ ಒಪ್ಪಿಕೊಂಡು ರಾಜನು ಕೂಡಲೇ ಹೊರಗೆ ಹೊರಟನು. ಅವನ ಹಿಂದೆ ಮಂತ್ರಿಯೂ ನಡೆದನು. ಇಬ್ಬರೂ ರಾಜಭವನದ ಆವರಣಕ್ಕೆ ಬಂದು, ಅಲ್ಲಿ ಸೇರಿದ ಅನೇಕ ಮಂದಿ ಪ್ರಜೆಗಳ ಗುಂಪನ್ನು ನೋಡಿದರು.

ಮಂತ್ರಿಯ ಆಜ್ಞೆಯಂತೆ ಅಶ್ವಿಕ ಭಟರು ಕಾಳೀವರ್ಮನ ಕೈಗಳ ಕಟ್ಟನ್ನು ಬಿಚ್ಚಿ ಅವನನ್ನು ಕುದುರೆಯ ಮೇಲಿನಿಂದ ಕೆಳಗಿಳಿಸಿದರು.

ಕಾಳೀವರ್ಮನು ವಿಜಯವೀರನಂತೆ ಎದೆಯುಬ್ಬಿಸಿ ನಿಂತು ರಾಜನನ್ನೂ ಮಂತ್ರಿಯನ್ನೂ ಅಳೆಯುವಂತೆ ನೋಡಿದನು.

ಆಮೇಲೆ ಮಾತಿಗೆ ತೊಡಗಿ, "ಮಹಾರಾಜರೇ! ತಮ್ಮ ಭಟರು ಮಾಡಿದ ಅನ್ಯಾಯವನ್ನು ನೋಡಿದಿರಾ ? ನಾನು ಮಾಡಿದ ಕೆಲಸ ಕೇಳಿದರೆ ನೀವು ನಿಜಕ್ಕೂ ಸಂತೋಷ ಪಡುವಿರಿ. ಅರಣ್ಯದಲ್ಲಿ ನನ್ನ ಮೇಲೆ ಹಠಾತ್ತಾಗಿ ಬಿದ್ದು ಬಂಧಿಸಿ ಬಹಳ ಅವಮಾನ ಪಡಿಸಿದರು. ಇದಕ್ಕಾಗಿ ಅವರನ್ನು ತಕ್ಕ ರೀತಿಯಲ್ಲಿ ದಂಡಿಸಬೇಕೆಂದು ವಿಜ್ಞಾಪಿಸುತ್ತೇನೆ." ಎಂದನು.

ಅವನ ಮಾತು ಕೇಳಿ ಜಿತಕೇತು ರಾಜನು ಆಶ್ಚರ್ಯಪಡುತ್ತ ಮಂತ್ರಿಯನ್ನು ನೋಡಿ, "ಮಹಾಮಂತ್ರಿ! ಇದೇನು ಇವನ ಅವಿವೇಕದ ಮಾತುಗಳು? ಇವನು ತುಂಬಾ ದುಡುಕಗಾರನಾಗಿದ್ದಾನೆ. ನನ್ನ ಈ ಹತ್ತು ವರ್ಷದ ಪರಿಪಾಲನೆಯಲ್ಲಿ ಅಪರಾಧಿಯಾದವನು ಇಂಥಾ ದುರುದುಂಡಿತನ ಮಾತಾಡಿದ್ದು ಕೇಳಿಲ್ಲ!" ಎಂದನು.

ಮಂತ್ರಿ ಕೋಪದಿಂದ ಕೈಯೆತ್ತಿ, "ಎಲೋ, ಸೊಕ್ಕಿನವನೇ! ಮಹಾರಾಜರ ಅನುಜ್ಞೆ ಇಲ್ಲದೆ ಮಾತಾಡಿದ್ದಕ್ಕಾಗಿ ನಿನಗೆ ಈ ಕ್ಷಣದಲ್ಲೇ ಶಿರಚ್ಛೇದ ಶಿಕ್ಷೆ ವಿಧಿಸಬೇಕಾಗಿದೆ. ಆದರೆ ನೀನು ಯಾರೆಂಬುದನ್ನು ಮೊದಲು ತಿಳಿಯಬೇಕಾಗಿರುವುದರಿಂದ ಬದುಕಿ ಉಳಿದಿರುವಿ. ಚಂದ್ರಶಿಲಾ ನಗರ ರಾಜ್ಯದ ಅರಣ್ಯದಲ್ಲಿ ದಾರಿದೋಚುವ ಕಳ್ಳರನ್ನೆಲ್ಲ ಉದಯಗಿರಿ





ರಾಜ್ಯದೊಳಗೆ ಪ್ರವೇಶ ಮಾಡಿಸಿದವನು ನೀನು ತಾನೇ? ನಿಜ ಹೇಳು? ನಿನ್ನ ಹೆಸರೇನೋ?" ಎಂದು ಕೇಳಿದನು.

ಕಾಳೀವರ್ಮನಿಗೆ ನಗು ಬಂದಿತು. ಕಳ್ಳರನ್ನು ದೂರ ಅಟ್ಟಿದುದು ಇವರಿಗೆ ಹಿಡಿಸಲಿಲ್ಲವೆಂದು ತೋರಿ ಆಶ್ಚರ್ಯವಾಯಿತು.

"ನನ್ನ ಹೆಸರು ಕಾಳೀವರ್ಮ. ನಾನು ಈ ರಾಜ್ಯದ ಪ್ರಜೆಯೇ. ಗ್ರಾಮಗಳ ಮೇಲೆ ಬಿದ್ದು ಧನಧಾನ್ಯಗಳನ್ನು ಕೊಳ್ಳೆ ಹೊಡೆಯುವ ದರೋಡೆಕೋರರನ್ನು ಗ್ರಾಮಸ್ಥರ ಸಹಾಯದಿಂದ ಇದಿರಿಸಿ, ಅದರಲ್ಲಿ ಕೆಲವರನ್ನು ಕೊಂದ ಮಾತು ನಿಜವೇ. ಉಳಿದವರು ತಪ್ಪಿಸಿಕೊಂಡು ಓಡಿ ಹೋದರು. ಅವರು ಉದಯಗಿರಿ ರಾಜ್ಯಕ್ಕೆ ಹೋದರೆ ನಾನೋ ಬಾಧ್ಯನು? ಆ ರಾಜ್ಯವನ್ನು ರಕ್ಷಿಸುವ ಹೊಣೆಯೂ ನಿಮಗಿದೆಯೇನು? ಅಲ್ಲಿನವರು ಬಳೆ ತೊಟ್ಟುಕೊಂಡವರೇನು?" ಎಂದ ಕಾಳೀವರ್ಮ.

ಜಿತಕೇತು ರಾಜನು ಕಾಳೀವರ್ಮನನ್ನು ಪರೀಕ್ಷಿಸಿ ನೋಡುತ್ತ "ಇವನು ಶಿಕ್ಷೆಗೆ ಪಾತ್ರನಾದ ಕಾಳೀವರ್ಮನೇ ನಿಜ. ಇಲ್ಲದಿದ್ದರೆ ಹೀಗೆಲ್ಲಾ ಬಿರುಸಾಗಿ ಮಾತನಾಡಲಾರ. ಎಲೋ, ಕಾಳೀವರ್ಮ! ನೀನು ನಮ್ಮ ಅನುಮತಿಯಿಲ್ಲದೆ ನಮ್ಮ ಪುರಜನರನ್ನು ಕೊಂದುದಲ್ಲದೆ, ನೆರೆದೇಶದ ರಾಜ್ಯದೊಂದಿಗೆ ಕಲಹಕ್ಕೂ ಕಾರಣನಾಗಿರುವೆ. ನಿನಗೆ ಮರಣ ದಂಡನೆ ವಿಧಿಸಿದ್ದೇನೆ. ಅದೇ ಸರಿ!" ಎಂದನು.

ರಾಜನ ಮಾತು ಕೇಳಿ ಕಾಳೀವರ್ಮನು ಕೆಲವು ಕ್ಷಣ ಏನೂ ತೋಚದೆ ಆಮೇಲೆ, "ಇದು ಯಾವ ನ್ಯಾಯ ಸೂತ್ರದಂತೆ ಕೊಡುವ ಶಿಕ್ಷೆ? ನನ್ನ ತಂದೆ ತಮ್ಮ ತಂದೆಯ ಕೈಕೆಳಗೆ ಸೈನಿಕೋದ್ಯೋಗಿಯಾಗಿದ್ದು ಒಂದು ಯುದ್ಧದಲ್ಲಿ ಪ್ರಾಣ ಬಿಟ್ಟರು. ನಾನು ತಮ್ಮ ಹತ್ತಿರ ಉದ್ಯೋಗ ಕೇಳಬೇಕೆಂದು ಗ್ರಾಮದಿಂದ ಹೊರಟು ಇಷ್ಟು ದೂರ ಬಂದೆ. ಪ್ರಜಾ ಕಂಟಕರಾದ ದರೋಡೆಕೋರರನ್ನು ಬೇಟೆಯಾಡಿದುದಕ್ಕೆ ನನಗೆ ಮರಣ ದಂಡನೆಯೇ? ಆ ಕಳ್ಳರು ನಿಮ್ಮ ಪ್ರಜೆಗಳೇ? ಒಳ್ಳೇ ಕತೆಯಾಗಿದೆ!" ಎಂದು ಹೇಳುವಾಗ ಅವನಿಗೆ ತುಸು ನಗುವೂ ಬಂದಿತು.

"ಇದು ಅವಿಧೇಯತೆ! ಅಧಿಕಪ್ರಸಂಗತನ!" ಎಂದು ಮಂತ್ರಿ ಸೈನಿಕರೊಂದಿಗೆ, "ಮಹಾರಾಜರ ಆಜ್ಞೆ ಕೇಳಿದಿರಷ್ಟೆ? ಈ ಕಾಳೀವರ್ಮನನ್ನು ನಗರದ ಹೊರಗಿರುವ ಶಿರೀಷ ವನದ ವಧಾಸ್ಥಳದಲ್ಲಿ ಗಲ್ಲಿಗೇರಿಸಿ ಶವವನ್ನು ಉದಯಗಿರಿ ರಾಜ ದರ್ಮುಖನಿಗೆ ಕಳುಹಿಸಿಬಿಡಿರಿ! ಶವದೊಂದಿಗೆ ನಾವು ಆ ರಾಜನಿಗೆ ಕೊಡುವ ಪತ್ರವನ್ನೂ ಒಯ್ಯಬೇಕು."

ಮಂತ್ರಿ ಗಂಭೀರವಾಗಿ ಹೀಗೆ ಹೇಳಿದ ಕೂಡಲೇ ಪ್ರಜೆಗಳ ಗುಂಪಿನಿಂದ ಕಲಕಲರವವೆದ್ದಿತು. ಅವರಲ್ಲಿ ಕೆಲವರು, ಈಗಾಗಲೇ ಕಾಳೀವರ್ಮನ ಅಭಿಮಾನಿಗಳಾದವರು, "ಇದು ಅನ್ಯಾಯ! ಕಾಳೀವರ್ಮನು ನಮಗೆ ಒಳಿತೇ ಮಾಡಿದನು. ಮಹಾರಾಜರು

ವಿಧಿಸಿದ ಶಿಕ್ಷೆಯನ್ನು ಪುನರಾಲೋಚನೆ ಮಾಡ ಬೇಕು!" ಎಂದು ಕೂಗಿ ಕೂಗಿ ಹೇಳಿದರು.

"ಯಾರವರು! ಮಹಾರಾಜರಿಗೇ ಆಲೋಚನೆ ಹೇಳುವಂಥ ಬುದ್ಧಿವಂತರು!" ಎಂದು ಗರ್ಜಿಸಿ ಮಂತ್ರಿ ಸೈನಿಕರ ಕಡೆಗೆ ತಿರುಗಿ, "ಆ ಕೂಗುವವ ರನ್ನೆಲ್ಲಾ ಹಿಡಿದುಕೊಂಡು ಹೋಗಿ ಸೆರೆಮನೆಯಲ್ಲಿ ತಳ್ಳಿರಿ! ಅಲ್ಲಿಯೂ ಛಡಿಯೇಟು ಬಾರಿಸಿರಿ!" ಎಂದು ಆಣತಿ ಮಾಡಿದನು.

ಕೂಡಲೇ ಸೈನಿಕರು ತಮ್ಮ ಕುದುರೆಗಳನ್ನು ಜನರ ಗುಂಪಿನ ಕಡೆಗೆ ಓಡಿಸಿದರು. ಜನರು ಹೆದರಿ ಚೀರಾ ಡುತ್ತ ಚೆಲ್ಲಾಚೆದರಾಗಿ ಓಡಿ ಹೋಗತೊಡಗಿದರು. ಕೆಲವರು ಬಿದ್ದು ಗಾಯಗೊಂಡರು. ಕೆಲವರು ಸತ್ತರು ಕೂಡಾ.

ಆದನ್ನು ನೋಡುತ್ತ ಜಿತಕೇತು ರಾಜನು ತೃಪ್ತಿ ಯಿಂದ ನಕ್ಕು, "ದಂಡ ನೀತಿಯೊಂದೇ ಈ ಅಲ್ಪ ಪ್ರಾಣಿಗಳಿಗೆ ತಕ್ಕ ಮದ್ದು. ಸಮಯಕ್ಕೆ ತಕ್ಕ ಆಜ್ಞೆ ಮಾಡಿದೆ ಮಹಾ ಮಂತ್ರೀ" ಎಂದು ಮಂತ್ರಿ ಯನ್ನು ಮೆಚ್ಚಿ ಭವನದೊಳಗೆ ಪ್ರವೇಶಿಸಿದನು. ರಾಜನ ಹಿಂದೆಯೇ ಮಂತ್ರಿಯೂ ತಲೆಯಾಡಿಸುತ್ತಾ ಹೋದನು.

ಜನರನ್ನು ದೂರ ಓಡಿಸಿದ ಮೇಲೆ ಅಶ್ವ ಸೈನಿಕರ ನಾಯಕನು ಕಾಳೀವರ್ಮನ ಬಳಿಗೆ ಬಂದು "ರಾಜರ ಆಜ್ಞೆ ಕೇಳಿದೆಯಷ್ಟೇ? ಪಾಪ! ಇಷ್ಟು ಸಣ್ಣ ವಯಸ್ಸಿನಲ್ಲೇ ನೀನು ಈ ಲೋಕವನ್ನು ಬಿಟ್ಟು ಹೋಗುವಂತಾದುದನ್ನು ನೋಡಿ ನನಗೆ ವ್ಯಸನ ವಾಗುತ್ತದೆ. ಯಾಕಪ್ಪಾ ಹೀಗೆಲ್ಲಾ ಬೇಡದ ಕೆಲಸ ಮಾಡಿ ಮೈ ಮೇಲೆ ತಂದುಕೊಂಡಿ? ನಾನಾದರೂ ಏನು ಮಾಡಲಿ? ರಾಜಾಜ್ಞೆ! ಆದು ನೆರವೇರದೇ ಗತ್ಯಂತರವಿಲ್ಲ, ನಡೆ!" ಎಂದನು.

ಬಹಳ ಕೋಪದಿಂದ ಕಾಳೀವರ್ಮನ ಮನಸ್ಸು ಹಾರಿ ತನ್ನ ಕತ್ತಿಯನ್ನು ಸೆಳೆದುಕೊಳ್ಳಲು ನೋಡಿ,



ಇದು ಸಮಯಲ್ಲವೆಂದುಕೊಂಡು ಕೋಪವನ್ನು ನುಂಗಿ, "ನೀನು ಗೌರವಿಸುವ ಈ ರಾಜನ ಆಜ್ಞೆ ಎಷ್ಟೊಂದು ಬುದ್ಧಿಹೀನವಾದುದೆಂದು ಇಲ್ಲಿ ಸೇರಿದ ನಗರವಾಸಿಗಳಿಗೆ ಹೊರತು ನಿಮಗಾರಿಗೂ ಅರ್ಥ ವಾಗುವಂತಿಲ್ಲ. ನೀನೊಬ್ಬ ರಾಜನಿಗೆ ಹೆದರಿ ನಡುಗು ವವನು. ಈ ಜಿತಕೇತು ರಾಜನು ಇನ್ನೊಬ್ಬ ರಾಜನಿಗೆ ಹೆದರಿ ಪ್ರಜೆಗಳಿಗೆ ಉಪಕಾರ ಮಾಡಿದ ನನ್ನನ್ನು ಗಲ್ಲಿಗೇರಿಸುತ್ತಾನೆ! ಎಂಥ ವಿಚಿತ್ರ ವಿಪರೀತ!" ಎಂದನು.

"ರಾಜ್ಯದ ಕ್ಷೇಮ ರಾಜನಿಗೇ ಗೊತ್ತು! ನಿನಗೂ ನನಗೂ ಏನು ಗೊತ್ತಾಗುತ್ತದೆ? ಸರಿಸರಿ ಹೊರಡು ಕುದುರೆಯ ಮೇಲೆಯೇ ಸಾಗಲಿ ನಿನ್ನ ಅಂತಿಮ ಪ್ರಯಾಣ. ಶಿರೀಷ ವನದ ವಧಾಸ್ಥಾನವನ್ನು ಸೇರು ವುದರೊಳಗೆ ಮಹಾರಾಜರಿಗೆ ದಯೆ ಬಂದು ನಿನ್ನ ಮರಣ ಶಿಕ್ಷೆಯನ್ನು ರದ್ದುಪಡಿಸಿದರೂ ಪಡಿಸಿಯಾರು. ಹಿಂದೆ ಕೆಲವರಿಗೆ ಆಖೈರು ಕ್ಷಣದಲ್ಲಿ ಹೀಗೆ ಶಿಕ್ಷೆ



ತಪ್ಪಿದ್ದುಂಟು. ನಿನ್ನ ಹಣೆಬರಹ ಹೇಗೋ ? ಬೇಗನೇ ಗೊತ್ತಾಗುತ್ತದೆ !" ಎಂದ ಆಶ್ವಿಕರ ನಾಯಕ.

ಕಾಳೀವರ್ಮನಿಗೆ ಅಂತಹ ಆಶೆ ಏನಿರಲಿಲ್ಲ. ಯಾವುದಾದರೊಂದು ಉಪಾಯದಿಂದ ಈ ಸೈನಿಕರಿಂದ ತಪ್ಪಿಸಿಕೊಂಡರೆ ಮಾತ್ರ ಬದುಕಬಹುದೆಂದುಕೊಂಡನು. ಜನದಟ್ಟಣೆಯ ನಗರದ ಮೇರೆ ದಾಟಿದ ಮೇಲೆಯೇ ಅದಕ್ಕೇನಾದರೂ ಸಂದು ದೊರೆಯುವುದೋ ಎಂದು ನೋಡಬೇಕಾಗಿತ್ತು. ಅಂತಲೇ ಅವನು ನಾಲ್ಕುಸುತ್ತಲೂ ಸೂಕ್ಷ್ಮವಾಗಿ ಪರೀಕ್ಷಿಸಿಕೊಂಡೇ ಸಾಗುತ್ತಿದ್ದನು.

ಆಶ್ವಿಕರ ನಾಯಕನು ತನ್ನ ಅನುಚರರಿಗೆ ಏನೋ ಸನ್ನೇ ತೋರಿಸಿ, ಕಾಳೀವರ್ಮನನ್ನು ನೋಡಿ, "ನಿನ್ನ ಕೈಗಳಿಗೆ ಈಗ ಸಂಕಲೆ ತಗಲಿಸಬೇಕಾಗಿದೆ. ಕೈಗಳನ್ನು ಮುಂದೆ ಚಾಚು" ಎಂದು ಸಂಕಲೆಯನ್ನು ಝಣ ಝಣಿಸಿಕೊಂಡು ಸಮೀಪ ಬಂದನು. "ಅದೇಕೆ ? ಇನ್ನು ಕೆಲವೇ ನಿಮಿಷಗಳಲ್ಲಿ ಸಾಯಲು ಹೋಗುವ ನನಗೆ ಈ ಸಂಕಲೆಯ ಬಂಧನವೇತಕ್ಕೆ ? ನಾನು ಓಡಿ ಹೋಗುವೆನೆಂದು ತಾನೇ ನಿನ್ನ ಭಯ ? ಬೇಕಾದರೆ ನನ್ನ ಕಾಲನ್ನು ಕಟ್ಟು. ಇಷ್ಟು ಮಂದಿ ಆಯುಧಪಾಣಿಗಳ ಮಧ್ಯದಿಂದ ನಾನು ತಪ್ಪಿಸಿಕೊಳ್ಳುವುದಾದರೂ ಹೇಗೆ? ಹಾಗೊಂದು ವೇಳೆ ಆದರೂ ಓಡುವವನನ್ನು ಹಿಡಿಯಲಾಗದಷ್ಟು ಕೈಲಾಗದವರೇ ನೀವು ?" ಎಂದು ಹೇಳಿ ಕಾಳೀವರ್ಮನು ಕುದುರೆಯಿಂದ ಕೆಳಗಿಳಿಯಲು ನೋಡಿದನು. "ಬೇಡ ಬೇಡ. ಹಾಗೇ ಇರು" ಎಂದ ಆಶ್ವಿಕರ ನಾಯಕ.

ಆಶ್ವಿಕರ ನಾಯಕನಿಗೆ ಕಾಳೀವರ್ಮನ ಮೇಲೆ ಒಂದು ಬಗೆಯ ನಂಬುಗೆಯುಂಟಾಗಿ ತೃಪ್ತಿಯಾಯಿತು. "ಕಾಳೀವರ್ಮಾ, ಸಾಯಲು ಇರುವವನ ಕೋರಿಕೆ ನೆರವೇರಿಸಬೇಕಾದುದು ಪುಣ್ಯಕಾರ್ಯವಂತೆ. ಒಂದು ವೇಳೆ ನೀನು ಓಡಿ ಹೋಗಲು ನೋಡಿದೆಯಾದರೆ ನಾವು ಹತ್ತು ಮಂದಿ ಆಶ್ವಿಕ ವೀರರಿದ್ದೇವೆ. ಹತ್ತು ಕತ್ತಿಗಳು ನಿನ್ನ ಶರೀರವನ್ನು ತೂತು ಕೊರೆದು ಸಾಯಿಸುತ್ತವೆ. ಅಥವಾ ಈ ಸಂಕಲೇಯೋ ನಿನ್ನ ತಲೆಯನ್ನು ಪುಡಿ ಮಾಡುತ್ತದೆ! ಸಾಯುವವರೆಗೂ ಜೀವದಿಂದಿರು ಜಾಗ್ರತೆ!" ಎಂದನು.

ತರುವಾಯ ಕಾಳೀವರ್ಮನನ್ನು ನಡುವಿನಲ್ಲಿರಿಸಿ, ಮುಂದಿನಿಂದ ಐದು ಮಂದಿ ಆಶ್ವಿಕರೂ, ಹಿಂದಿನಿಂದ ಐದು ಮಂದಿ ಆಶ್ವಿಕರೂ ಹೀಗೆ ಮುಂದೆ ಹೊರಟರು. ಈಗ ಪ್ರಜೆಗಳು ಅವರ ಹತ್ತಿರ ಬರಲು ಹೆದರಿ, ದೂರ ದೂರ ಬೀದಿಯ ಬದಿಗಳಲ್ಲಿ ನಿಂತುಕೊಂಡು, ಚಿತಕೇತು ರಾಜನ ದುಷ್ಟತನವನ್ನು ಕುರಿತು ಮೆಲ್ಲಮೆಲ್ಲನೆ ಮಾತಾಡಿಕೊಂಡಿದ್ದರು.

ಹೀಗೆ ಒಂದು ಗಂಟೆ ಹೊತ್ತು ಸಾಗಿದ ಮೇಲೆ ನಗರದ ಹೊರ ಭಾಗದಲ್ಲಿದ್ದ ಶಿರೀಷ ವನವನ್ನು ಹೊಕ್ಕರು. ಅಲ್ಲಿ ಅನೇಕಾನೇಕ ಶಿರೀಷ ವೃಕ್ಷಗಳು ಆಕಾಶದ ಕಡೆಗೆ ಮುತ್ತಿಡುವಂತೆ ಬೆಳೆದಿದ್ದುವು. ಆ

ವನದ ಆಚೆಗೆ ಗುಡ್ಡಗಳೂ, ಒಂದಕ್ಕಿಂತ ಒಂದು ಎತ್ತರವಾಗಿದ್ದುವು. ಆ ಗುಡ್ಡದಿಂದ ಬೀಳುವ ಜಲ ಪಾತವೊಂದು ಸುಮಾರು ಮೂವತ್ತು ಅಡಿ ಕೆಳಗಡೆ ಯಿದ್ದ ಬಂಡೆಗಲ್ಲಿನ ಮೇಲೆ ಬೀಳುತ್ತ ಭಯಂಕರ ಶಬ್ದ ಮಾಡಿಕೊಂಡಿತ್ತು. ಅಲ್ಲೆಲ್ಲಾ ಎಷ್ಟು ಪ್ರಕೃತಿ ಸೌಂದರ್ಯವಿದ್ದಿತೋ ಅಷ್ಟೇ ಭಯಂಕರವಾಗಿಯೂ ಕಾಣಿಸುತ್ತಿತ್ತು.

ಅಶ್ವಿಕರೊಂದಿಗೆ ಮರಗಳ ನಡುವಿಗೆ ಹೋದ ಕೂಡಲೇ ಕಾಳೀವರ್ಮನು "ಈ ವನದಲ್ಲಿಯೇ ನನ್ನ ಗಲ್ಲು ಶಿಕ್ಷೆ?" ಎಂದು ಕೇಳಿದನು. ಅವನ ಕಣ್ಣು ತಪ್ಪಿಸಿಕೊಳ್ಳುವ ದಾರಿಯನ್ನು ಹುಡುಕುತ್ತಿದ್ದಿತು. ಒತ್ತೊತ್ತಾದ ಮರಗಳೂ ಅದರಾಚೆಗಿನ ಗುಡ್ಡಗಳೂ ಅವನನ್ನು ಅವಸರಪಡಿಸುವಂತಿದ್ದುವು.

ಅಶ್ವಿಕರ ನಾಯಕನು "ಗಲ್ಲೂ ಇಲ್ಲೇ, ಶಿರ ಚ್ಛೇದವೂ ಇಲ್ಲೇ" ಎಂದು ತಲೆಯಾಡಿಸಿದನು. ಆಗ ಕೋಣದ ಮೇಲೆ ಕುಳಿತಿದ್ದ ಕರ್ರಗಿನ ಆಕೃತಿಯೊಂದು ಅವರ ಇದಿರಿನಲ್ಲಿ ಕಂಡುಬಂತು. ಕೋಣದ ಮೇಲೆ ಕುಳಿತಿದ್ದವನು ತಲೆಯಿಂದ ಕಾಲಿನ ವರೆಗೂ ಕರ್ರಗಿನ ಮುಸುಗು ಧರಿಸಿದ್ದನು. ಆ ಮುಸುಗಿನಲ್ಲಿ ಕಣ್ಣುಗಳ ಸ್ಥಳದಲ್ಲಿ ಮಾತ್ರ ರಂಧ್ರಗಳಿದ್ದುವು.

ಆ ಕೋಣ ಸವಾರನು ತನ್ನ ಕೈಯಲ್ಲಿದ್ದ ದಪ್ಪ ತೋರದ ಕೊಡಲಿಯನ್ನು ಮೇಲೆತ್ತಿ, ಅಶ್ವಿಕರ ಬಳಿಗೆ ವೇಗವಾಗಿ ಬಂದು, "ಯಾರು ನೀವು? ಈ ಮೊದಲು ಈ ಕಟುಕ ಪ್ರವರನಿಂದ ಶಿರಚ್ಛೇದ ಮಾಡಲ್ಪಟ್ಟವನ ಪ್ರೇತಗಳೋ? ಅಲ್ಲ, ಹೊಸದಾಗಿ ತಲೆ ಕಡಿಸಿಕೊಳ್ಳಲಿಕ್ಕೆ ಬಂದ ಅಪರಾಧಿಗಳೋ? ಬೇಗ ಹೇಳಿರಿ!" ಎಂದು ಭೀಕರವಾದ ಗೊಗ್ಗರ ದನಿಯಿಂದ ಕೇಳಿದನು.

ದೊಡ್ಡ ಕೋಣದ ಮೇಲೆ ಕರಿಮುಸುಕಿನವನು ಬಂದು ಗೊಗ್ಗರ ಗರ್ಜನೆಯಿಂದ ಮಾತು ತೊಡಗಿದ ಕೂಡಲೇ ಕುದುರೆಗಳು ಬೆದರಿ ಹೀಂಕಾರ ಮಾಡುತ ಆಚೀಚೆ ಓಡಿದುವು. ತಪ್ಪಿಸಿಕೊಳ್ಳಲಿಕ್ಕೆ ಇದೇ ತಕ್ಕ ಸಂಧಿ ಎಂದು ಕಾಳೀವರ್ಮನಿಗೆ ತೋರಿತು. ಅವನು ತನ್ನ ಕುದುರೆಯನ್ನು ಅಶ್ವಿಕನ ಮೇಲೆ ಎಗರಿಸ



ಬೇಕೆಂದಿರುವಾಗ, ಕೋಣದ ಮೇಲಿನವನು ಹಾರಿ ಬಂದು ಕುದುರೆಯ ಕಡಿವಾಣವನ್ನು ಎಳೆದು ಹಿಡಿದು ಕೊಂಡು, "ಲೋ! ಇಲ್ಲಿಯ ಶಿರೀಷ ವೃಕ್ಷಗಳೆಂದರೆ ಭೂತ ಪಿಶಾಚಿಗಳಿಗೆ ತುಂಬಾ ಇಷ್ಟ. ಆದಕ್ಕೇ ಮಹಾ ರಾಜರು ಕಳ್ಳಸುಳ್ಳ ದ್ರೋಹಿಗಳಿಗೆ ಮರಣಶಿಕ್ಷೆ ಗಳನ್ನು ಇಲ್ಲಿಯೇ ಜರುಗಿಸುತ್ತಾರೆ. ಹೇಳು, ನೀನು ಕಳ್ಳನೋ, ದೇಶ ದ್ರೋಹಿಯೋ? ಆದಕ್ಕೆ ತಕ್ಕ ಹಾಗೆ ನನ್ನ ಕೊಡಲೀ ಪೆಟ್ಟು ಬೀಳುತ್ತದೆ. ಪೆಟ್ಟು ಮಾತ್ರ ಒಂದೇ ಒಂದು!" ಎಂದನು.

"ನೀನು ಹೇಳುವ ಎರಡೂ ನಾನಲ್ಲ. ನೀನು ಯಾವ ಜಾತಿಯ ಪಿಶಾಚಿ?" ಎಂದು ಕೇಳಿದ ಕಾಳೀ ವರ್ಮ. ಹಾಗೆಯೇ ಅವನ ಕೈಯಲ್ಲಿದ್ದ ಕಡಿವಾಣ ವನ್ನು ಎಳೆದುಕೊಳ್ಳಲು ಪ್ರಯತ್ನ ಮಾಡಿದ.

ಅಷ್ಟರಲ್ಲಿ ಸುತ್ತುಮುತ್ತಲೂ ಓಡಿದ ಆಶ್ವಿಕರು ಮತ್ತೆ ಸಮೀಪ ಬಂದು ಸೇರಿದರು. ಆಶ್ವಿಕರ ನಾಯಕನು ಕೋಪದಿಂದ ಕೋಣದವನನ್ನು ನೋಡಿ, "ಎಲೋ ಏನಿದು ನಿನ್ನ ಅಧಿಕಾರ ಪ್ರತಾಪ? ನಿನ್ನ ನ್ನೇನಾದರೂ ಪಿಶಾಚಿ ಹಿಡಿಯಿತೇ? ನಿನ್ನ ಕೊಡಲಿಗೆ ಕೆಲಸವಿಲ್ಲ. ಇವನು ಶಿರಚ್ಛೇದದವನಲ್ಲ. ಗಲ್ಲು ಶಿಕ್ಷೆಯವ! ಪ್ರಾಣ ಹೋದ ಮೇಲೆ ಶವವು ಭದ್ರ ವಾಗಿ ನಮ್ಮ ಕೈಗೆ ಬರಬೇಕು. ತಿಳಿಯಿತೇ? ಬಿಡು ಬಿಡು!" ಎಂದನು.

ಕೋಣದವನು ಕಡಿವಾಣವನ್ನು ಬಿಟ್ಟು "ಏನು ಕುದುರೇ ನಾಯಕರೇ! ನಿಮ್ಮ ನಗರದ ಪ್ರಧಾನ ಕಟುಕನಾದ ನನ್ನನ್ನು ಎಲೋ ಮಗನೇ ಅಂತ ಮರ್ಯಾದೆ ಇಲ್ಲದೆ ಕರೀತೀರಲ್ಲ! ನಮ್ಮ ಮಹಾ ರಾಜರು ಎಂದೋ ಒಂದು ದಿನ ನಿಮಗೂ ಶಿರಚ್ಛೇದ ಮಾಡಲು ನನ್ನ ಬಳಿಗೆ ಕಳುಹಿಸಬಹುದು. ನೆನಪಿಟ್ಟು ಕೊಳ್ಳುತ್ತೇನೆ. ಅಂಥಾ ದಿನ ಬಂದರೆ ನಿಮ್ಮ ತಲೇನ ನನ್ನ ಮೊಂಡು ಕೊಡಲಿಯಿಂದ ಒಣ ಮರ ಕಡಿಯು ವಂತೆ ಕಡಿದೇನು!" ಎಂದನು.

"ಛೀ! ಹುಳಿ ಹೆಂಡ ಕುಡುಕ ಭಂಡ! ಈ ಅವಮಾನ ಎಷ್ಟು ಮಾತ್ರಕ್ಕೂ ಸಹಿಸಲಾರೆ!" ಎಂದು ಆಶ್ವಿಕ ನಾಯಕನು ಗಟ್ಟಿಯಾಗಿ ಗರ್ಜಿಸಿ ಸರ್ರನೇ ಕತ್ತಿ ಹಿರಿದನು. ಅದೇ ಕ್ಷಣದಲ್ಲಿ ಕಾಳೀ ವರ್ಮನು ತನ್ನ ಕೈಗೆಟಕಿದ ಕಟುಕನ ಕೈಯಲ್ಲಿದ್ದ ಕೊಡಲಿಯನ್ನು ಕಿತ್ತೆಳೆದು ಆಶ್ವಿಕ ನಾಯಕನ ಕಂಠದ ಮೇಲೆ ಬೀಸಿದನು. ಇದೆಲ್ಲಾ ಕಣ್ಣು ಮುಚ್ಚಿ ಬಿಡುವುದರೊಳಗೆ ನಡೆದುಹೋಯಿತು.

ಆಶ್ವಿಕ ನಾಯಕನ ತಲೆ ಮುಂಡದಿಂದ ಬೇರಾಗಿ ಕೆಳಗೆ ಬಿದ್ದುರುಳಿದ ಶಬ್ದದೊಂದಿಗೆ, "ಭಲೇರೇ! ಆದಿ ಭಲ್ಲೂಕಾ! ಜಯಜಯ! ಧೈರ್ಯಶಾಲಿ ಯುವಕಾ! ಜಯಜಯ!" ಎಂಬ ಕೂಗು ಕೇಳಿಸಿತು.

(ಇನ್ನೂ ಇದೆ)





# ವೀರಹನುಮಾನ್

**ಪಾಂ**ಡವರು ಕೌರವರೊಂದಿಗೆ ಕಪಟದ ಜೂಜಿನಲ್ಲಿ ಸೋತು, ಎಲ್ಲವನ್ನೂ ಕಳೆದುಕೊಂಡು ದ್ರೌಪದಿಯೊಂದಿಗೆ ವನವಾಸಕ್ಕೆ ಹೋದರು. ಹಾಗೆ ಅವರು ವನವಾಸದಲ್ಲಿರುವ ಕಾಲದಲ್ಲಿ, ದ್ರೌಪದಿ ಭೀಮನೊಂದಿಗೆ ಒಂದು ದಿನ ವನವಿಹಾರ ಮಾಡಿಕೊಂಡಿರುವಾಗ ಒಂದು ಸಾನು ಪ್ರದೇಶವನ್ನು ನೋಡಿದಳು. ಭೀಮನೊಂದಿಗೆ ಅಲ್ಲಿಗೆ ಹೋಗಿ, ಅಲ್ಲಿರುವ ಸ್ಫಟಿಕ ಶಿಲೆಯ ಮೇಲೆ ಕುಳಿತು, ದೂರದಲ್ಲಿ ಕಾಣುವ ಹಿಮಗಿರಿ ಶಿಖರದ ಅಂದಚೆಂದಗಳನ್ನು ನೋಡತೊಡಗಿದಳು.

ಆ ಸಮಯದಲ್ಲಿ ಭಾರಿ ಗಾಳಿ ಬೀಸತೊಡಗಿತು. ಆ ಗಾಳಿಯಲ್ಲಿ ತೇಲಿಕೊಂಡು ಅಪೂರ್ವವಾದುದೊಂದು ಹೂವು ಬಂದು ದ್ರೌಪದಿಯ ಮಡಿಲಲ್ಲಿ ಬಿದ್ದಿತು. ಅಷ್ಟರಲ್ಲಿ ಆ ಪ್ರದೇಶವೆಲ್ಲಾ ಅದರಿಂದ ಹೊರಟ ಸುಪರಿಮಳದಿಂದ ತುಂಬಿಹೋಯಿತು. ಆ ಹೂವಿನಲ್ಲಿ ಅನೇಕ ದಳಗಳಿದ್ದುವು. ಗಾಳಿಯಿಂದಲೋ ಅಥವಾ ಮತ್ತಾವುದರಿಂದಲೋ ದಳಗಳೆಲ್ಲ ಸ್ವಲ್ಪ ಹಿಸುಕಿದಂತಿದ್ದುವು. ಅದುವೇ ಅಪೂರ್ವವಾದ ಸೌಗಂಧಿಕಾ ಕಮಲ ಪುಷ್ಪ. ಕುಬೇರನ ಪಟ್ಟಣವಾದ ಅಲಕಾಪುರಿಗೆ ಸಮೀಪದಲ್ಲಿರುವ ಮಾನಸ ಸರೋವರದೊಂದಿಗೆ ಬೆರೆತ ದಳಸರೋವರದಲ್ಲಿ ಅದು ದಿನಕ್ಕೊಂದು ಹೂ ಮಾತ್ರ ಅರಳುತ್ತದೆ. ಕುಬೇರನು ಪ್ರತಿದಿನ ಪುಷ್ಪಕ ವಿಮಾನದಲ್ಲಿ ಕೈಲಾಸಕ್ಕೆ ಹೋಗುವಾಗ ಆ ಪುಷ್ಪವನ್ನೊಯ್ದು ಶಿವನನ್ನು ಪೂಜಿಸಿ, ಮುಂಚಿನ ದಿನ ಅರ್ಚಿಸಿದ ಹೂವನ್ನು ದೇವ ನಿರ್ಮಾಲ್ಯವಾಗಿ ತೆಗೆದುಕೊಂಡು ಹೋಗುವನು. ಅದು ಆ ದಿನ ಪುಷ್ಪಕವಿಮಾನದಿಂದ ಹೇಗೋ ಜಾರಿಕೊಂಡು ಗಾಳಿಯಲ್ಲಿ ತೇಲಿ ಬಂದು ದ್ರೌಪದಿಗೆ ದೊರಕಿತ್ತು.

ದ್ರೌಪದಿ ಅತ್ಯಾಶ್ಚರ್ಯದಿಂದ ಆ ಪುಷ್ಪವನ್ನು ನೋಡಿ ಆನಂದ ಪುಲಕಿತೆಯಾಗಿ ಅಂತಹದೇ ಹೊಸ ಹೂವನ್ನು ತಂದು ಕೊಡುವಂತೆ ಭೀಮನನ್ನು ಕೇಳಿಕೊಂಡಳು. ಸಮೀಪದಲ್ಲೆಲ್ಲೋ ಅದು ಇರಬಹುದೆಂದುಕೊಂಡು ಭೀಮನು ಈಗ ತರುತ್ತೇನೆಂದು ಹೇಳಿ



ಗದೆಯನ್ನು ಭುಜದಮೇಲೇರಿಸಿಕೊಂಡು ಆ ಪುಷ್ಪವನ್ನು ಹುಡುಕುತ್ತಾ ಹೊರಟನು.

ಆದರ ಪರಿಮಳ ಹೊರಟು ಬರುವ ದಿಕ್ಕನ್ನೇ ಗುರಿಯಾಗಿಟ್ಟುಕೊಂಡು ಹೋಗಿ ಹೋಗಿ ಹಿಮಾಲಯದ ಸಾನು ಭೂಮಿಯಲ್ಲಿರುವ ಕದಳೀ ವನವನ್ನು ಪ್ರವೇಶಿಸಿ ಮುಂದೆ ಮುಂದೆ ಹೋದನು.

ಆ ವನದಲ್ಲಿಯೇ ಹನುಮಂತನು ದೊಡ್ಡದೊಂದು ಬಾಳೇ ಗಿಡದ ಕಾಂಡವನ್ನು ಒರಗಿಕೊಂಡು ಹಣ್ಣು ಮುದುಕನ ರೂಪದಲ್ಲಿ ರಾಮ ಸ್ಮರಣೆ ಮಾಡಿಕೊಂಡಿದ್ದನು. ಅವನ ಬಾಲವು ಬಹು ದೂರದ ವರೆಗೂ ದಾರಿಗಡ್ಡವಾಗಿ ಬಿದ್ದಿತ್ತು.

ಭೀಮನು ಅದನ್ನು ದಾಟಿಕೊಂಡು ಹೋಗಲು ಸಹಜವಾದ ರಾಜಸಗುಣವು ಅಡ್ಡ ಬಂದು, ಸುತ್ತಲೂ ನೋಡಿದನು. ಎಲ್ಲಿಯೋ ರಾಮರಾಮ ಎಂಬ ಧ್ವನಿ ಕೇಳಿ ಬರುತ್ತಿದ್ದಿತು. ಅದು ತೂಕಡಿಸುವವನಂತಿದ್ದ ಹನುಮಂತನ ಕಂಠದಿಂದ ಹೊರಡುವ ಧ್ವನಿ ಎಂದು ಅವನಿಗೆ ತಿಳಿಯಲಿಲ್ಲ. ಯಾವುದೋ ಮುದಿ ಕೋತಿ ದಾರಿಗಡ್ಡವಾಗಿ ಬಾಲ ಚಾಚಿ ಕುಳಿತಿದೆ ಎಂದೇ ತಿಳಿದು, ನೆಲ ಅದುರುವ ಹಾಗೆ ಕಾಲಿನ ಸಪ್ಪಳ ಮಾಡಿ ಹೆದರಿಸಿದನು.

ಹನುಮಂತನು ಆಯಾಸಪಟ್ಟವನ ಹಾಗೆ ಅರೆ ಗಣ್ಣಿನಿಂದ ಭೀಮನನ್ನು ನೋಡಿ, "ಅಪ್ಪಾ, ಹಣ್ಣು ಮುದುಕ. ಮೈ ಭಾರ ತಾಳಲಾರೆ. ನೀನೇ ಆ ಬಾಲವನ್ನು ಸ್ವಲ್ಪ ಎತ್ತಿ ಆಚೆಗಿಡಪ್ಪ! ಸ್ವಲ್ಪ ಶ್ರಮಪಡು! ಹುಡುಗನಾಗಿದ್ದೀಯೇ!" ಎಂದನು.

ಭೀಮನು ಗದೆಯನ್ನು ತಗ್ಗಿಸಿ ಬಾಲವನ್ನು ಅದರಿಂದ ತಳ್ಳಲು ನೋಡಿದನು. ಅದು ಸ್ವಲ್ಪವೂ ಅಲುಗಲಿಲ್ಲ. ಕೈಯಿಂದ ದೂಡಿ ನೋಡಿದನು, ಗದೆಯನ್ನು ಕೆಳಗಿಟ್ಟು ಎರಡು ಕೈಗಳಿಂದಲೂ ಪೂರ್ತಿ ಬಲದಿಂದ ದೂಡಲು ನೋಡಿದನು. ಅವನು ವಿಶ್ವ ಪ್ರಯತ್ನ ಮಾಡಿದರೂ ಅದೇನೂ ಕದಲಲಿಲ್ಲ. ಆಶ್ಚರ್ಯವಾಗತೊಡಗಿತು ಅವನಿಗೆ.

ಅವನ ಅವಸ್ಥೆಯನ್ನು ನೋಡಿ ಹನುಮಂತನು ಬೇಸತ್ತು, "ಏನಪ್ಪ ನೀನು? ಹಿಡಿದು ಹಿಸುಕಿಹಿಸುಕಿ ನನ್ನ ಕೊಲ್ಲುವೆಯಲ್ಲಾ? ಒಂದು ಮುದಿ ಕೋತಿಯ ಬಾಲಕ್ಕಾಗಿ ಪ್ರಾಣ ಬಿಡುವೆಯಾ? ಏನು ಘನ ಕಾರ್ಯ ಸಾಧಿಸಬೇಕೂಂತ ಗದೆಗಿದೆ ಹೊತ್ತುಕೊಂಡು ದೊಡ್ಡ ಭೀಮನ ಹಾಗೆ ಹೊರಟಿದ್ದೀ? ನಿಮ್ಮಂಥ ಹುಡುಗರಿಗೆ ದುಡುಕು ಬುದ್ಧಿಯಲ್ಲದೆ ಆಲೋಚನೆಯೇ ಇಲ್ಲ. ಅದರಲ್ಲಿಯೂ ಪ್ರಿಯಳಾದ ಹೆಣ್ಣಿನ ಆಶೆ ತೀರಿಸಬೇಕೆನ್ನುವಾಗ ಮತ್ತಿಷ್ಟು ಅವಸರ. ಎಲ್ಲಿಲ್ಲದ ಚುರುಕು ಬಂದ ಹಾಗೆ! ಅಂಥಾದ್ದೇನೂ ನಿನಗಿಲ್ಲವಷ್ಟೇ" ಎಂದನು.

ಭೀಮನು ಕೋಪದಿಂದ ಕುದಿಯುತ್ತ, "ಅಧಿಕ ಪ್ರಸಂಗ ಸಾಕು ಮಾಡು!" ಎನ್ನುತ್ತಾ ಗದೆಯನ್ನು ಎತ್ತಿಹಿಡಿದು ಹನುಮಂತನ ಮೇಲೆ ಹೊಡೆಯುವ ಭಂಗಿಯಲ್ಲಿ ನಿಂತನು.

ಹನುಮಂತನು ನಗುತ್ತ, "ಓಹೋಹೊ! ಗದಾ ಯುದ್ಧಕ್ಕೆ ನನ್ನನ್ನು ಕರೆಯುವಿಯೇನು? ಇಷ್ಟು ದಿನ ಯುದ್ಧಾಭ್ಯಾಸ ಮಾಡಿದ್ದಕ್ಕೆ ಸಾರ್ಥಕವಾಯಿತು ಬಿಡು! ಈ ಮುದುಕನ ಹತ್ತಿರ ಯುದ್ಧಕ್ಕೆ ಇಳಿಯುವಿಯಲ್ಲಾ! ನಿನ್ನಂಥ ದುಡುಕು ತಮ್ಮಂದಿರಿದ್ದರೆ ಅಣ್ಣಂದಿರಿಗೆ ವನವಾಸವೇ ಗತಿ! ಸರಿ ಸರಿ! ಬಾ. ನನಗೂ ಒಂದು ಗದೆ ಇದೆ. ನನ್ನ ಹಾಗೇ ಅದು ಕೂಡ ಮುದಿ ಗದೆಯೇ!" ಎಂದು ಹೇಳುತ್ತ, ದೂರದಲ್ಲಿರುವ ತನ್ನ ಗದೆಗೆ ಕೈ ಚಾಚಿದನು.

ಅದು ಎಟಕದಿರಲು, "ಸ್ವಲ್ಪ ಆ ಗದೆಯನ್ನು ಈಚೆಗೆ ಕೊಡುತಮ್ಮಾ. ಗದಾ ಯುದ್ಧಕ್ಕೆ ತಯಾರಾದೆಯಲ್ಲ ಮತ್ತೆ!" ಎಂದನು.

ಭೀಮನು ಆ ಗದೆಯನ್ನು ಎತ್ತಿ ಅವನಿಗೆ ಕೊಡಲು ಪ್ರಯಾಸಪಡತೊಡಗಿದನು. ಆಗ ಹನುಮಂತನು, "ನಮ್ಮ ಕಾಲದಲ್ಲಿ ಇಂತಹ ಗದೆಗಳಲ್ಲದೆ, ಈಗಿನಂಥ ತಗಡಿನ ಆಟದ ಗದೆಗಳೆಲ್ಲ ಇರಲಿಲ್ಲ. ಇನ್ನೂ ಹಿಂದಿನ ಕಾಲದಲ್ಲಿ ಬಂಡೆ ಕಲ್ಲಿನ ಗದೆಗಳನ್ನೇ ಉಪಯೋಗಿಸುತ್ತಿದ್ದೆವು." ಎನ್ನುತ್ತಾ, ತನ್ನ ಗದೆಯನ್ನು ಹಿಡಿದು ತಟಕ್ಕನೆತ್ತಿ ಲೀಲೆಯಿಂದ ತಿರುಗಿಸಿ ಭೀಮನ ತಲೆಯ ಮೇಲೆ ಆಶೀರ್ವದಿಸುವಂತೆ ತಾಗಿಸಿದನು.

ಭೀಮನು ಕಲ್ಲು ತಾಗಿದಂತೆ ನೊಂದು ಹಾಯ್ಕೆಂದು ಕೋಪದಿಂದ ಅವಡುಗಚ್ಚಿ ತನ್ನ ಗದೆಯಿಂದ ಹನುಮಂತನನ್ನು ಹೊಡೆದನು. ಹನುಮಂತನು ಗಟ್ಟಿಯಾಗಿ ನಿಂತು ತನ್ನ ಗದೆಯನ್ನು ಎತ್ತಿ ಹುಂಕರಿಸಿದನು. ಆ ಹೂಂಕಾರಕ್ಕೆ ಕದಳೀವನವೇ ಪ್ರತಿಧ್ವನಿಸಿತು ನಡುಗುತ್ತಾ.

ಆ ಮೇಲೆ ಇಬ್ಬರೂ ಬಹಳ ಹೊತ್ತಿನವರೆಗೆ ಗದಾಯುದ್ಧ ಮಾಡಿದರು, ಭೀಮನ ಗದೆ ಪಟ್ಟು ತಪ್ಪಿ ದೂರ ಹೋಗಿಬಿತ್ತು. ಕೂಡಲೇ ಹನುಮಂತನು ತನ್ನ ಗದೆಯನ್ನೂ ಕೆಳಗೆ ಹಾಕಿ, ಮಲ್ಲಯುದ್ಧಕ್ಕಾಗಿ ತೊಡೆಯನ್ನು ತಟ್ಟಿದನು. ಇಬ್ಬರೂ



ಮಲ್ಲಯುದ್ಧ ಮಾಡುತ್ತಿರುವಾಗ ಭೀಮನಿಗೆ ಒಂದು ಹೊಸ ವಿಷಯ ಗೊತ್ತಾಯಿತು.

ಈ ಮುದಿಕೋತಿಯವನು ಮನಸ್ಸು ಮಾಡಿದ್ದರೆ ತನ್ನನ್ನು ಯಾವಾಗಲೋ ಮಣ್ಣು ಮುಕ್ಕಿಸಿಬಿಡುತ್ತಿದ್ದನು. ಆದರೆ ಇವನು ಗದಾಯುದ್ಧದಲ್ಲಿಯೂ, ಈ ಮಲ್ಲಯುದ್ಧದಲ್ಲಿಯೂ ತನಗೆ ತಿಳಿಯದ ಹಿಡಿತ ಹೊಡೆತ, ಪಟ್ಟು ಗುಟ್ಟುಗಳನ್ನು ಶಿಷ್ಯನಿಗೆ ಕಲಿಸಿಕೊಡುವ ಗುರುವಿನಂತೆ ಯುದ್ಧ ತೋರಿಸುತ್ತಿದ್ದಾನೆ. ಹಾಗಾದರೆ ಓ! ತಿಳಿಯಿತು! ಇವನು ಸಾಮಾನ್ಯ ಕೋತಿಯಲ್ಲ!"

ತಟ್ಟನೆ ಭೀಮನು ಹನುಮಂತನ ಮುಂದೆ ಮೊಣಕಾಲೂರಿ ಅಡ್ಡ ಬಿದ್ದು, "ಮಹಾನುಭಾವಾ! ತಿಳಿದೆನು! ತಿಳಿದೆನು! ನೀನು ಯಾರೆಂದು ತಿಳಿದೆನು. ನೀನು ಸಾಕ್ಷಾತ್ ಹನುಮಂತನೇ ನಿಜ. ನಾನು ವಾಯುದೇವನ ವರಪ್ರಸಾದದಿಂದ ಬಂದವನು. ಕುಂತೀಕುಮಾರ ಭೀಮಸೇನ. ಧರ್ಮರಾಯನ



ದೊಡ್ಡ ತಮ್ಮ. ಅನುಗ್ರಹಿಸಬೇಕು ನನ್ನನ್ನು ದೊಡ್ಡಣ್ಣಾ !" ಎಂದು ಸ್ತೋತ್ರ ಮಾಡಿದನು.

ಹನುಮಂತನು ಭೀಮನನ್ನು ವಾತ್ಸಲ್ಯದಿಂದ ಎಬ್ಬಿಸಿ, "ಹೌದು ತಮ್ಮಾ! ನಾವಿಬ್ಬರೂ ವಾಯು ನಂದನರೇ !" ಎಂದನು.

ಭೀಮಮನು, "ಅಣ್ಣಾ! ನಿನ್ನ ವಿಷಯವಾಗಿ ತುಂಬಾ ಕೇಳಿದ್ದೇನೆ. ನಿನ್ನ ಬ್ರಹ್ಮಾಂಡವಾದ ರೂಪ ವನ್ನು ನೋಡಬೇಕೆಂದು ಆಶೆಯಾಗಿದೆ." ಎಂದು ಕೈಗಳನ್ನು ಜೋಡಿಸಿದನು.

"ಭೀಮಾ, ಇದು ದ್ವಾಪರಯುಗ. ನನ್ನ ಪೂರ್ತಿ ವಿಶ್ವರೂಪವನ್ನು ನೀನು ನೋಡಲು ಸಾಧ್ಯವಾಗದು. ನಿನ್ನ ದೃಷ್ಟಿ ಶಕ್ತಿಯ ಮೇರೆಯವರೆಗೆ ತೋರಿಸುತ್ತೇನೆ ನೋಡು !" ಎಂದನು.

ಕೂಡಲೇ ಹನುಮಂತನ ಶರೀರವು ಮೇಘ ಮಂಡಲವನ್ನು ದಾಟಿ ಬೆಳೆದುಕೊಂಡುಹೋಯಿತು. ಬಾಲವನ್ನು ಎತ್ತಿ ಆಕಾಶವನ್ನು ಸುತ್ತುತ್ತಾ ಹನು ಮಂತನು ಭೀಕರವಾಗಿ ಗರ್ಜಿಸಿದನು. ಆಸಿಡಿಲ್ದನಿಗೆ ಭೀಮನು ಬೆದರಿ ಬೀಳುತ್ತ, ಆ ಮಹಾ ರೂಪ ವನ್ನು ನೋಡಲಾಗದೆ, ಕಣ್ಣುಮುಚ್ಚಿಕೊಳ್ಳುತ್ತ, ವಿಶ್ವ ರೂಪವನ್ನು ಉಪಸಂಹರಿಸಿಕೊಳ್ಳುವಂತೆ ಪ್ರಾರ್ಥಿಸಿ ಕೊಂಡನು.

ಕೂಡಲೇ ಹನುಮಂತನು ಯಥಾ ಪ್ರಕಾರಕ್ಕೆ ಬಂದನು. ಮೊದಲಿನಂತೆ ಮುದಿ ಹನುಮನಾಗಿ, ಭೀಮನ ಬೆನ್ನು ತಟ್ಟುತ್ತ, "ಇನ್ನೂ ನೀನು ಹೀಗೆ ಹೊರಟಿರುವುದರ ಕಾರಣ ಹೇಳಲೇ ಇಲ್ಲ," ಎಂದು ನೆನಪೂಡಿಸಿದನು.

ಭೀಮನು ತಾನು ಬಂದುದರ ಕಾರಣವನ್ನು ಹೇಳಿದನು. ಅದನ್ನು ಕೇಳಿ ಹನುಮಂತನು, "ಭೀಮ ಸೇನಾ, ಅದರ ವಿಷಯ ನನಗೆ ಗೊತ್ತಿದೆ. ಸೌಗಂಧಿಕಾ ಕಮಲವಿರುವ ದಳ ಸರೋವರವನ್ನು ಕೇಶಿಕಿ ಎಂಬ ಯಕ್ಷಿಣಿ ಕಾವಲು ಕಾಯುತ್ತಿದ್ದಾಳೆ. ಅವಳು ಬಹಳ ಪ್ರಚಂಡಳು. ಅವಳ ಮುಂದೆ ಎಂತಹ ಬಲ ಪರಾಕ್ರಮಗಳೂ ಉಪಯೋಗಕ್ಕೆ ಬಾರವು. ಅವಳ ಮೋಹಕರವಾದ ಮಾಯಾಜಾಲಗಳಿಗೆ ವಶವಾಗದ ವರೇ ಇಲ್ಲ. ನಿನ್ನ ಮುಂದೆ ಅವಳು ಆಟ ತೋರಿಸು ವಾಗ, ನಾನು ಜಪಿಸುವ ರಾಮನಾಮವು ನಿನಗೆ ಎಚ್ಚರಿಕೆ ಕೊಡುತ್ತದೆ. ಆಗ ಜಾಗರೂಕನಾಗು. ಇನ್ನೊಂದನ್ನು ನೆನಪಿಟ್ಟುಕೋ. ಅವಳು ಅಪ್ರತಿಮ ಶಿವಭಕ್ತಳು. ಒಂದು ಮುಷ್ಟಿ ನನ್ನ ರೋಮಗಳನ್ನು ಹಿಡಿದುಕೊಂಡುಹೋಗು. ಅವಳು ನಿನ್ನನ್ನು ನಿಜ ರೂಪದಿಂದ ಅಡ್ಡಗಟ್ಟಿದಾಗೆಲ್ಲಾ ಒಂದು ರೋಮ ಅವಳ ಮುಂದೆ ಹಾಕು. ಆ ರೋಮ ಬಿದ್ದ ಜಾಗ ದಲ್ಲಿ ಒಂದು ಶಿವಲಿಂಗವೇಳುತ್ತದೆ. ಕೂಡಲೇ ಯಕ್ಷಿಣಿ ಸಹಸ್ರನಾಮಗಳಿಂದ ಅದನ್ನು ಅರ್ಚಿಸುತ್ತಾ ಕೂಡು ತ್ತಾಳೆ. ಈ ವಿಧವಾಗಿ ನಿನ್ನ ಕೆಲಸ ಮುಗಿಸಿಕೊಂಡು ಬಂದುಬಿಡು." ಎಂದು ಹೇಳಿ ಹನುಮಂತನು ತನ್ನ ಬಾಲದ ಕುಚ್ಚಿನಿಂದ ಸ್ವಲ್ಪ ರೋಮ ತೆಗೆದು



ಭೀಮನಿಗೆ ಕೊಟ್ಟನು. ಆ ಮೇಲೆ ದಳ ಸರೋವರಕ್ಕೆ ಹೋಗುವ ದಾರಿ ತೋರಿಸಿದನು.

ಯಕ್ಷಿಣಿ ಕೇಶಿಕಿ ದೂರದಲ್ಲಿ ಬರುವ ಭೀಮನನ್ನು ನೋಡಿದಳು. ಆ ಕೂಡಲೇ ಎಂಥವರನ್ನಾದರೂ ಸಮ್ಮೋಹನ ಮಾಡಬಲ್ಲ ಅದ್ಭುತ ಸೌಂದರ್ಯವತಿಯಾಗಿ ರೂಪತಾಳಿ ಹಾಡನ್ನೂ ನಾಟ್ಯವನ್ನೂ ಪ್ರಾರಂಭಿಸಿದಳು.

ಅವಳನ್ನು ನೋಡುತ್ತಾ ಭೀಮನು ಪರವಶನಾದನು. ದ್ರೌಪದಿಯನ್ನೂ ತಾನು ಬಂದ ಕಾರ್ಯವನ್ನೂ ಮರೆತನು. ಆಗ ರಾಮನಾಮವು ಅವನ ಕಿವಿಗಳಲ್ಲಿ ಮಾರ್ಮೊಳಗತೊಡಗಿತು. ಕೂಡಲೇ ಭೀಮನು ತಿಳಿವಿಗೆ ಬಂದು ಅವಳನ್ನು ಲಕ್ಷ್ಯಮಾಡದೆ ಮುಂದೆ ಸಾಗಿದನು. ಅವಳು ಎಷ್ಟೇ ವಿಧವಾಗಿ ಮರುಳು ಮಾಡಲು ನೋಡಿದರೂ ಭೀಮನು ಅವಳ ಮಾಯಾಜಾಲದಲ್ಲಿ ಬೀಳದೆ ಹೋಗಲು, ಯಕ್ಷಿಣಿ ಬೇಸತ್ತು, ಕಡೆಗೆ ಭಯಂಕರಾಕಾರದಿಂದ ಅವನನ್ನು ಅಡ್ಡಗಟ್ಟಿದಳು. ಭೀಮನು ಹನುಮಂತನನ್ನು ನೆನೆಸುತ್ತಾ ಅವನು ಕೊಟ್ಟ ಒಂದು ರೋಮವನ್ನು ಅವಳ ಮುಂದೆ ಹಾಕಿದ ಕೂಡಲೇ ಸಾಕ್ಷಾತ್ಕರಿಸಿದ ಶಿವಲಿಂಗಕ್ಕೆ ಕೇಶಿಕಿ ಮಣಿದು ಕುಳಿತು ಕಣ್ಣು ಮುಚ್ಚಿ ಸಹಸ್ರ ನಾಮಾರ್ಚನೆಗೆ ತೊಡಗಿದಳು, ಅವಳ ಆರಾಧನೆ ಪೂರ್ತಿಯಾಗುವುದರೊಳಗೆ ಭೀಮನು ದಳ ಸರೋವರದಲ್ಲಿಳಿದು ಸೌಗಂಧಿಕಾ ಕಮಲವೊಂದನ್ನು ಕಾಂಡದೊಂದಿಗೇ ಕಿತ್ತು, ಪಲಾಯನ ಕೈಕೊಂಡನು.

ಕೇಶಿಕಿ ಪ್ರಚಂಡವೇಗದಿಂದ ಅವನನ್ನು ಬೆಂಬತ್ತಿದಳು. ಆಗ ಅವಳ ತಲೆ ಕೂದಲ ರಾಶಿ ಅಗ್ನಿಜ್ವಾಲೆಗಳಂತೆ ಕಿಡಿಗಾರುತ್ತಾ ಭೀಮನನ್ನು ಮುತ್ತಿದುವು.

ಭೀಮನು ಏನೂ ಅಂಜದೆ ದಾರಿಯುದ್ದಕ್ಕೂ, ಒಂದೊಂದು ಹನುಮಂತನ ರೋಮವನ್ನು ಹಾಕಿ, ಆ ಮಹಾ ಶಿವಭಕ್ತೆಗೆ ಪೂಜಾ ಕಾಲಕ್ಷೇಪ ಕಲ್ಪಿಸುತ್ತ, ತಪ್ಪಿ ಪಾರಾಗಿ ಹನುಮಂತನಿರುವ ಕದಳೀವನವನ್ನು ಸೇರಿಕೊಂಡನು.

ಅವನು ತನ್ನ ಕೈಯಲ್ಲಿದ್ದ ಸೌಗಂಧಿಕಾ ಕಮಲವನ್ನು ಹನುಮಂತನಿಗೆ ತೋರಿಸುತ್ತ, "ಮಹಾನುಭಾವಾ! ಈಗ ನಿನ್ನ ಅನುಗ್ರಹದಿಂದ ನನಗೆ ವಿಜಯವು ಕೈಗೂಡಿದಂತಾಯಿತು. ಆದರೆ ಮುಂದೆ ಕೌರವರೊಂದಿಗೆ ನಮಗೆ ನಡೆಯಲಿರುವ ಯುದ್ಧದಲ್ಲಿ ನೀನು ಸಹಾಯಮಾಡಬೇಕೆಂದು ನಮ್ಮ ಪಾಂಡವರೈವರ ಪಕ್ಷದಿಂದ ನಾನು ಬೇಡಿಕೊಳ್ಳುತ್ತೇನೆ." ಎಂದು ಕೈಮುಗಿದು ಬೇಡಿಕೊಂಡನು.

ಆದಕ್ಕೆ ಹನುಮಂತನು, "ಭೀಮಾ, ನಾನು ಈ ಯುಗದಲ್ಲಿ ಯುದ್ಧ ಮಾಡುವುದಿಲ್ಲ. ಆದರೆ ನೀನು ಕೇಳಿಕೊಂಡದ್ದರಿಂದ, ನಿಮ್ಮ ಸಂಗ್ರಾಮವು ನಡೆಯುವಾಗ, ನಿನ್ನ ತಮ್ಮ ಅರ್ಜುನನ ರಥದ ಮೇಲೆ ಧ್ವಜವನ್ನು ಅಂಟಿ ಹಿಡಿದುಕೊಂಡು ರಕ್ಷೆಯಾಗಿರು

ತ್ತೇನೆ. ನಿಮಗೆ ವಿಜಯ ಉಂಟಾಗುತ್ತದೆ. ಇನ್ನು ನೀನು ನಿಶ್ಚಿಂತನಾಗಿ ಹೋಗಿ, ಸೌಗಂಧಿಕಾಕಮಲವನ್ನು ದ್ರೌಪದಿಗೆ ಕೊಟ್ಟು ಅವಳ ಆಶೆ ತೀರಿಸು. ಮಾಯಾ ಜಿಂಕೆಯನ್ನು ಬಯಸಿ ಆ ದಿನ ಸೀತೆ ಎಷ್ಟೋ ಕಷ್ಟಗಳನ್ನು ತಂದುಕೊಂಡಳು. ಈಬಗೆಯ ಕೋರಿಕೆಗಳನ್ನು ಕೋರುವುದು ಅಷ್ಟು ಒಳ್ಳೆಯದಲ್ಲವೆಂದು ನಾನು ಹೇಳಿದೆನೆಂದು ಹೇಳು. ಸೌಗಂಧಿಕಾ ಕಮಲವನ್ನು ಶಿವಾರ್ಚನೆ ಮಾಡಿ, ಹಾಗೇ ಒಂದು ದಿನ ಬಿಟ್ಟು ಮರುದಿನ ಸ್ನಾನಮಾಡಿ-ಶಿವ ನಿರ್ಮಾಲ್ಯವಾಗಿ ಇದನ್ನು ಮುಡಿದುಕೊಳ್ಳಲಿ. ಶಿವಾರ್ಚನೆ ಮಾಡಿದುದರಿಂದ ನಿಮಗೆ ಶುಭವೂ ಕುಬೇರನ ಐಶ್ವರ್ಯವೂ ಉಂಟಾಗುತ್ತದೆ. ಸೌಗಂಧಿಕಾ ಕಮಲ ಎಂದಿಗೂ ಬಾಡದು" ಎಂದು ತಿಳಿಹೇಳಿ ಭೀಮನನ್ನು ಆಶೀರ್ವದಿಸಿ ಕಳುಹಿಸಿದನು.

ಭೀಮನು ಸೌಗಂಧಿಕಾ ಕಮಲವನ್ನು ದ್ರೌಪದಿಗೆ ಕೊಟ್ಟು ಅವಳಿಂದ ಶಿವಾರ್ಚನೆ ಮಾಡಿಸಿದನು. ಹನುಮಂತನು ಹೇಳಿದ ಬುದ್ಧಿ ಮಾತನ್ನೂ ಹೇಳಿದನು. ದ್ರೌಪದಿ ಅದನ್ನು ಕೇಳಿ ನಾಚಿಕೆಯಿಂದ ಸ್ವಲ್ಪ ಹೊತ್ತು ಸುಮ್ಮನಿದ್ದು, ಆಮೇಲೆ ಮಂದಹಾಸದಿಂದ ಮುಖವರಳಿಸಿ, "ನಾನು ಸೌಗಂಧಿಕಾ ಕಮಲವನ್ನು ಕೋರಿಕೊಂಡದ್ದರಿಂದಲೇ ಆ ಮಹಾನುಭಾವನ ರಕ್ಷೆ ನಮಗೆ ಲಭಿಸಿತು. ನನ್ನ ಆಶೆಯಿಂದ ನಮಗೆಲ್ಲ ಒಳ್ಳೇದೇ ಆಯಿತನ್ನಿ." ಎಂದಳು.

ಅವಳ ಮಾತು ಕೇಳಿ ಭೀಮನೊಂದಿಗೆ ಪಂಚ ಪಾಂಡವರೂ ಒಂದೇ ಕೊರಳಿನಿಂದ, "ಹೌದು! ಹೌದು!" ಎಂದರು. ಹನುಮಂತನ ಅನುಗ್ರಹ ತಮ್ಮ ಮೇಲಾದುದಕ್ಕೆ ಅವರಿಗಾದ ಆನಂದ ಅಷ್ಟಿಷ್ಟಲ್ಲ.

ಆಮೇಲೆ ಪಾಂಡವರ ಕಥೆ ನಡೆದೇ ನಡೆಯಿತು. ಅವರು ನಿಯಮ ಪ್ರಕಾರ ಹನ್ನೆರಡು ವರ್ಷ ವನವಾಸ ಮುಗಿಸಿ, ತರುವಾಯ ಒಂದು ವರ್ಷ ಅಜ್ಞಾತವಾಸವನ್ನೂ ಜಯಪ್ರದವಾಗಿ ಮುಗಿಸಿ



ಹಿಂದಿರುಗಿ ಬಂದು ಕೃಷ್ಣನನ್ನು ಕೌರವರ ಬಳಿಗೆ ತಮ್ಮ ರಾಯಭಾರಿಯಾಗಿ ಕಳುಹಿಸಿಕೊಟ್ಟರು.

ಕೃಷ್ಣನು ಹೇಳಿದ ಹಿತವಚನಗಳೊಂದೂ ದುರ್ಯೋಧನನಿಗೆ ತಾಗಲಿಲ್ಲ. ಸಂಧಿ ಸಂಧಾನ ಯಾವುದೂ ನೆರವೇರಲಿಲ್ಲ. ಹದಿನೆಂಟುದಿನ ಯುದ್ಧವೆಂದೇ ನಿಶ್ಚಯವಾಯಿತು. ಉಭಯ ಪಕ್ಷಗಳ ಸೇನೆಗಳು ಸೇರಿದುವು, ರಣ ದುಂದುಭಿ ಮೊಳಗಿತು. ಅರ್ಜುನನ ರಥದ ಮೇಲೆ ರಪರಪಿಸುವ ಪತಾಕೆಯನ್ನು ಹನುಮಂತನು ಸೂಕ್ಷ್ಮರೂಪದಿಂದ ಅಂಟಿ ಹಿಡಿದುಕೊಂಡು ಹಾರಿದನು. ಕೃಷ್ಣನು ಅರ್ಜುನನ ರಥವನ್ನು ಓಡಿಸುವ ಸಾರಥಿಯಾಗಿದ್ದನು. ವಿಜಯಂ ಧ್ವಜವು ಉಜ್ವಲವಾಗಿ ಹಾರಾಡಿತು.

ಕುರುಕ್ಷೇತ್ರದಲ್ಲಿ ಮಹಾಭಾರತ ಯುದ್ಧವು ಆಚಂದ್ರಾರ್ಕಸ್ಥಾಯಿಯಾಗಿರುವಂತೆ ನಡೆಯಿತು. ಕೃಷ್ಣನು ಚಕ್ರಧಾರಿಯಾಗಿ ಸುಮ್ಮನಿದ್ದಂತೆ, ಚಾಟಿಯಿಂದ ಕುದುರೆಗಳನ್ನು ಕದಲಿಸುತ್ತಾ ಅರ್ಜುನನಿಂದ

ಮಹಾಯುದ್ಧ ಮಾಡಿಸುವ ಸೂತ್ರಧಾರಿಯಾಗಿ ಮೆರೆದನು. ವಿಜಯಶಾಲಿಯಾದ ಅರ್ಜುನನಿಗೆ ವಿಜಯನೆಂಬ ಸಾರ್ಥಕ ನಾಮ ಪ್ರಾಪ್ತವಾಯಿತು. ಕೃಷ್ಣನು ವಿಜಯಸಾರಥಿ ಅನ್ನಿಸಿಕೊಂಡನು.

ದುಶ್ಶಾಸನನು ದ್ರೌಪದಿಯ ಜುಟ್ಟು ಹಿಡಿದು ಸಭೆಗೆ ಎಳೆದುಕೊಂಡು ಬಂದಾಗ ಬಿಚ್ಚಿದ ಕೂದಲನ್ನು, ಅವನ ರಕ್ತದಿಂದಲೇ ನೆನೆಸಿ ಕಟ್ಟುವೆನೆಂದು ಭೀಮನು ಘೋರ ಪ್ರತಿಜ್ಞೆ ಮಾಡಿದ್ದನು. ಹಾಗೆಯೇ ಯುದ್ಧದಲ್ಲಿ ಭೀಮನು ದುಶ್ಶಾಸನನ ಎದೆ ಸೀಳಿ ಆ ರಕ್ತವನ್ನು ದ್ರೌಪದಿಯ ತಲೆಗೂದಲಿಗೆ ಸವರಿ ಮುಡಿಗಟ್ಟಿಸಿದನು. ಆಗ ದ್ರೌಪದಿ ಸೌಗಂಧಿಕಾ ಕಮಲವನ್ನು ತಲೆಯಲ್ಲಿ ಮುಡಿದುಕೊಂಡು ವಿಜಯಧ್ವಜನಾಗಿದ್ದ ಹನುಮಂತನನ್ನು ನಮಸ್ಕರಿಸಿದಳು.

ಗದಾಯುದ್ಧದಲ್ಲಿ ಭೀಮನು ದುರ್ಯೋಧನನ ತೊಡೆಗಳನ್ನು ಮುರಿದು ಹಾಕಿದನು. ಅಲ್ಲಿಗೆ ಭೀಮನ ಪ್ರತಿಜ್ಞೆಗಳು ತೀರಿದುವು. ಕೌರವರು ನಿಶ್ಶೇಷರಾಗಿ ಹತರಾದರು. ಪಾಂಡವರಿಗೆ ಪೂರ್ಣ ವಿಜಯ ಕೈಗೂಡಿತು.

ಕೃಷ್ಣನು ಹನುಮಂತನನ್ನು ಅಭಿನಂದಿಸಿ, "ಹನುಮಾನ್, ನಿನ್ನ ಕಾರ್ಯದೀಕ್ಷೆಯಿಂದ ಆ ಕಾಲದಲ್ಲಿ ರಾಮನಿಗೆ ಮುಖ್ಯ ಸಹಾಯಕನಾದೆ. ಈಗ ಕುರುಕ್ಷೇತ್ರ ಯುದ್ಧದಲ್ಲಿ ವಿಜಯಧ್ವಜನಾಗಿ ಹಾರಿ ಧರ್ಮರಾಯನಿಗೆ ಜಯವನ್ನು ಕೈಗೂಡಿಸಿದೆ! ಧನ್ಯನು ನೀನು ಹನುಮಾ!" ಎಂದನು.

ಆಗ ಹನುಮಂತನು ವಿನಯದಿಂದ, "ಮಹಾರಥನಾದ ಅರ್ಜುನನಿಗೆ ನೀನು ಚಕ್ರಪಾಣಿಯಾಗಿ ಸಾರಥ್ಯ ಮಾಡುತ್ತಿರುವಾಗ, ಜಯವಾಗದೆ ಎಲ್ಲಿಗೆ ಹೋಗುತ್ತದೆ ? ಕ್ರಿಯಾ ಸಿದ್ಧಿಗೆ ನಿನ್ನ ಮಹಾ ಸತ್ವವನ್ನು ಮಿಂಚಿದ ಬಲ ಬೇರೆ ಇದೆಯೆ ? ನಾನು ಕೇವಲ ಒಂದು ಚಿಹ್ನೆ ಮಾತ್ರವೇ. ಸಾಧನ ಸಾಮಗ್ರಿಗಳ ಮಹತ್ವವನ್ನು ತೋರಿಸುವುದು ನಿನ್ನದೊಂದು ಲೀಲೆಯಲ್ಲವೇ ?" ಎಂದನು.

"ಹೌದು. ಹೌದು. ಕ್ರಿಯಾ ಸಿದ್ಧಿಗೆ ನೀನೊಬ್ಬ ಚಿಹ್ನೆಯೂ ನಿಜವೇ. ಯಾವ ಕಾಲದಲ್ಲಿಯೇ ಆಗಲಿ, ನಿನ್ನ ಗುರುತಿನ ಪತಾಕೆಯಿರುವಲ್ಲಿ ವಿಜಯವೇ ಸಿದ್ಧಿಸುತ್ತದೆ. ನಿನ್ನ ವಿಜಯಧ್ವಜವು ಚಿರಾಯುವಾಗಿ ಕೀರ್ತಿಯಿಂದ ಬೆಳಗುವಂತಹುದು!" ಎಂದು ಕೃಷ್ಣನು ಭರತವಾಕ್ಯಗಳನ್ನು ಉದುರಿಸಿದನು.

ಕಡೆಗೆ ಹನುಮಂತನು ಪಾಂಡವರೆಲ್ಲರ ವಂದನೆಗಳನ್ನು ಪಡೆದುಕೊಂಡು, ಕೃಷ್ಣನಿಂದ ಅಪ್ಪಣೆ ಪಡೆದು, ಗಂಧಮಾದನ ಪರ್ವತಕ್ಕೆ ಹಾರಿ ಹೋದನು. ಅಲ್ಲಿ ರಾಮನಾಮದ ಸ್ಮರಣೆ ಮಾಡುತ್ತ ತಪಸ್ಸಿನಲ್ಲಿ ಮಗ್ನನಾದನು.

